# ಜೆಮ್ಸ್‌ನ ಮೋಜನ್ನು ಸವಿಯಿರಿ!

## ಗೆಲ್ಲಲು ಅದೃಷ್ಟದ 1001 ಬಹುಮಾನಗಳಿವೆ!

ಕಾಣೆಯಾದ ಸಂಖ್ಯೆ ಯಾವುದು ?

Outer ring: 2, 4, 6, 20, 4, 48, 2, ?

Inner ring: 64, 24, 80, 96



ತ್ವರೆಮಾಡಿರಿ!

ಉತ್ತರಗಳು ತಲುಪಲು ಕೊನೆಯ ತಾರೀಖು : 13-4-1979




ನಿಮ್ಮ ಉತ್ತರವನ್ನು, ಕ್ಯಾಡ್‌ಬರಿಸ್ ಜೆಮ್ಸ್‌ನ ಒಂದು ಖಾಲಿಯಾದ ದೊಡ್ಡ (30 ಗ್ರಾಂ) ಪ್ಲಾಸ್ಟಿಕ್ ಪ್ಯಾಕೆಟ್‌ನ ಜೊತೆಗೆ ಕಳಿಸಿರಿ. ಮೊದಲ 1001 ಸರಿ ಉತ್ತರಗಳನ್ನು ಕಳಿಸಿದವರಿಗೆ. ಪ್ರತಿಯೊಬ್ಬರಿಗೂ, ರೂಪಾಯಿಯ ಸ್ಟೇಟ್ ಬ್ಯಾಂಕ್ ಉಡುಗೊರೆ ಚೆಕ್ ಕೊಡಲಾಗುವುದು.

ದಯವಿಟ್ಟು ಉತ್ತರವನ್ನು ಮತ್ತು ನಿಮ್ಮ ಹೆಸರು ಹಾಗೂ ವಿಳಾಸವನ್ನು ಇಂಗ್ಲಿಷ್‌ನಲ್ಲಿ ಮಾತ್ರ ಬರೆಯಿರಿ— ಅಚ್ಚು ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆಯಿರಿ

ಈ ವಿಳಾಸಕ್ಕೆ
ಉತ್ತರಗಳನ್ನು ಕಳಿಸಿ:
"Fun with Gems", Dept. No. A-18
Post Box No. 56,
Thane 400 601, Maharashtra.

## ಚಾಕ್‌ಲೇಟ್ ಉಳ್ಳ ಬಣ್ಣ ಬಣ್ಣದ ಕ್ಯಾಡ್‌ಬರಿಸ್ ಜೆಮ್ಸ್

CHAITRA-C-263 KAN

**Statement about ownership of CHANDAMAMA (Kannada)**
**Rule 8 (Form VI), Newspapers (Central) Rules, 1956**

| | | |
|---|---|---|
| 1. *Place of Publication* | ... | 'CHANDAMAMA BUILDINGS'<br>2 & 3, Arcot Road<br>Vadapalani, Madras-600 026 |
| 2. *Periodicity of Publication* | ... | MONTHLY<br>1st of each calendar month |
| 3. *Printer's Name* | ... | B. V. REDDI |
| *Nationality* | ... | INDIAN |
| *Address* | ... | Prasad Process Pvt Limited<br>2 & 3, Arcot Road, Vadapalani<br>Madras-600 026 |
| 4. *Publisher's Name* | ... | B. VISWANATHA REDDI |
| *Nationality* | ... | INDIAN |
| *Address* | ... | Chandamama Publications<br>2 & 3, Arcot Road, Vadapalani<br>Madras-600 026 |
| 5. *Editor's Name* | ... | NAGI REDDI |
| *Nationality* | ... | INDIAN |
| *Address* | ... | 'Chandamama Buildings'<br>2 & 3, Arcot Road, Vadapalani<br>Madras-600 026 |
| 6. *Name & Address of individuals who own the paper* | ... | CHANDAMAMA CHILDREN'S TRUST FUND<br>Beneficieries: |

1. B. V. HARISH
2. B. V. NARESH
3. B. V. L. ARATI
4. B. L. NIRUPAMA
5. B. V. SANJAY
6. B. V. SHARATH
7. B. L. SUNANDA
8. B. N. RAJESH
9. B. ARCHANA
10. B. N. V. VISHNU PRASAD
11. B. L. ARADHANA
12. B. NAGI REDDI

All Minors—by Trustee:
M. UTTAMA REDDI, 9/3, V.O.C. Street, Madras-600 024

I, B. Viswanatha Reddi, hereby declare that the particulars given above are true to the best of my knowledge and belief.

**B. VISWANATHA REDDI**
*Signature of the Publisher*

1st *March* 1979

# ಚಂದಮಾಮ

ಸಂಸ್ಥಾಪಕರು: 'ಚಕ್ರಪಾಣಿ'

ಸಂಚಾಲಕರು: ನಾಗಿರೆಡ್ಡಿ

---

ಮಕ್ಕಳಿಗೆ ತಾಯಿಗಿಂತ ಹೆಚ್ಚಿನ ದೈವವಿಲ್ಲ. ಮೊದಲನೇ ಸ್ಥಾನ ತಾಯಿಗೇ. ಎರಡನೆಯ ಸ್ಥಾನ ತಂದೆಗೆ. ಮಾತೃ ಭಕ್ತಿಯಲ್ಲಿ ಅನ್ಯೋನ್ಯತೆಯ ಐಕ್ಯತಾ ಭಾವವೂ ಸಲಿಗೆಯೂ ಹೆಚ್ಚು. ಪಿತೃ ಭಕ್ತಿಯಲ್ಲಿ ಭಯ ಗೌರವಗಳ ಅಂಶ ಹೆಚ್ಚು. ಬೆಳೆಯುತ್ತಾ ಬಂದಂತೆ ಕರ್ತವ್ಯ ಪ್ರಜ್ಞೆಗೆ ಪಿತೃ ಶ್ರದ್ಧೆ ಬೇಕು. ಮಾತೃ ಭಕ್ತಿ ಅಂತಃ ಸತ್ವವಾಗಿರಬೇಕು. ಮಾತೃ ಭಕ್ತಿಗೆ ಗರುತ್ಮಂತನ ಕಥೆ ಆದರ್ಶವಾಗಿದೆ. ಈ ಸಂಚಿಕೆಯಲ್ಲಿ ಅದನ್ನು ಓದುವಿರಂತೆ.

## ಅಮರವಾಣಿ

ಶೀಲಂ ಶೌಚಂ ಶಾಂತಿರ್ದಾಕ್ಷಿಣ್ಯಂ<br>
ಮಧುರತಾ ಕುಲೇ ಜನ್ಮ<br>
ನ ವಿರಾಜಂತಿ ಹಿ ಸರ್ವೇ<br>
ವಿತ್ತವಿಹೀನಸ್ಯ ಪುರುಷಸ್ಯ

[ಶೀಲ, ಶೌಚ, ಕ್ಷಮ, ದಯೆ, ಮಧುರ ಸ್ವಭಾವ, ಉತ್ತಮ ಕುಲ ಇವೆಲ್ಲಾ ಧನಹೀನನಲ್ಲಿದ್ದರೂ ಎದ್ದು ಕಾಣಿಸವು.]

---

ಸಂಪುಟ: ೭೨ ಮಾರ್ಚಿ '೭೯ ಸಂಚಿಕೆ: ೩

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦






**ಕೆ. ಪದ್ಮನಾಭ ಭಟ್, ಕಾರ್ಕಳ (ದ. ಕನ್ನಡ)**

ಪ್ರ: ಭೂಕಂಪಗಳು ಒಂದೇ ಕಡೆಯಲ್ಲಿ ಬರಲು ಕಾರಣವೇನು ?

ಉ: ಭೂಗರ್ಭದಲ್ಲಿ ತುಂಬಾ ಕೊರಕಲುಗಳಿವೆ. ಅವುಗಳೊಂದಿಗೆ ಬಲವಾದ ಚಲನಗಳೂ ಇವೆ. ಭೂಗರ್ಭದೊಳಗಿರುವ ಉಷ್ಣದಿಂದ ಶಿಲೆಗಳು ಕರಗುತ್ತವೆ. ಆ ದ್ರವಗಳು ಕೊರಕಲುಗಳ ಮೂಲಕ ಹರಿಯುತ್ತ, ಭೂರಂಧ್ರಗಳಿಂದ, ಹೊರಕ್ಕೆ ಚಿಮ್ಮಿ ವಿಧ್ವಂಸನವನ್ನುಂಟುಮಾಡುತ್ತವೆ. ಒಮ್ಮೊಮ್ಮೆ ಅಗ್ನಿ ಪರ್ವತಗಳು ಸಿಡಿದಾಗ ಒಂದು ದ್ವೀಪವೋ, ದ್ವೀಪದ ಸ್ವಲ್ಪ ಭಾಗವೋ ನಾಶವಾಗಬಹುದು. ಇಂತಹ ಘಟನೆಗಳಲ್ಲಿ ಅದಕ್ಕೆಷ್ಟು ಶಕ್ತಿಯಿತ್ತೆಂಬುದನ್ನು ನಾವು ಊಹಿಸಬಹುದು. ಆ ಶಕ್ತಿಯಿಂದ ಭೂಗರ್ಭದಲ್ಲಿರುವ ಕೊರಕಲುಗಳು ದೊಡ್ಡವಾಗುವುದೋ ಏರು ತಗ್ಗುಗಳಾಗುವುದೋ ನಡೆಯುವಾಗ ಭೂಕಂಪ ಉಂಟಾಗುತ್ತದೆ. ಅಂತಹ ಕೊರಕಲುಗಳು ಹೆಚ್ಚಾಗಿರುವ ಭಾಗದಲ್ಲಿಯೇ ಯಾವಾಗಲೂ ಭೂಕಂಪಗಳ ಫಲಿತಗಳು ಕಾಣುತ್ತವೆ. ನಿಜಕ್ಕೂ ಭೂಮಿ ಕಂಪಿಸುವಾಗ ಪ್ರಪಂಚದ ಎಲ್ಲಾ ಕಡೆಗಳಲ್ಲಿಯೂ ಕಂಪನವು ತಿಳಿಯಬಹುದು. ಎಲ್ಲಿಯೋ ಜಪಾನಿನಲ್ಲಿ ಭೂಕಂಪವಾದರೆ ಕೆಲವು ಸಾವಿರ ಮೈಲು ದೂರದಲ್ಲಿರುವ ಯಂತ್ರಗಳು ಅವನ್ನು ಕಂಡುಹಿಡಿಯಬಲ್ಲವು.

**ಜಿ. ಎನ್. ರಮಣಾರೆಡ್ಡಿ, ಪಲ್ಲಲಕುಪ್ಪಂ (ತಮಿಳುನಾಡು)**

ಪ್ರ: ಬಸ್ಸು ನಡೆಯುತ್ತಿರುವಾಗ ಅದರಲ್ಲಿಯ ದೀಪದ ಸುತ್ತಲೂ ಹಾತೆಗಳು ತಿರುಗುತ್ತಾ ಇರುತ್ತವೆ. ಬಸ್ಸಿನೊಂದಿಗೆ ಅವು ಹೇಗೆ ಪ್ರಯಾಣಮಾಡುತ್ತವೆ ?

ಉ: ಬಸ್ಸಿನ ವೇಗವೂ ಬಸ್ಸಿನೊಂದಿಗಿರುವ ಗಾಳಿಯ ವೇಗವೂ ಹಾತೆಗಳಿಗೆ ತಲಪಿದ ಮೇಲೆ ಅವು ಬಸ್ಸಿನೊಂದಿಗೆ ಪ್ರಯಾಣಮಾಡಲು ಯಾವ ಪ್ರಯತ್ನವನ್ನೂ ಮಾಡಬೇಕಾಗಿಲ್ಲ. ಯಾವ ಮನುಷ್ಯನಾದರೂ ಕುಳಿತುಕೊಂಡು ಗಂಟೆಗೆ ಅನೇಕ ಮೈಲುಗಳ ವೇಗದಲ್ಲಿ ಕದಲಲಾರನು. ಆದರೆ ಮನುಷ್ಯರು ವಿಮಾನಗಳಲ್ಲಿ ಅಷ್ಟೊಂದು ವೇಗದಿಂದ ಹೋಗಬಲ್ಲರಲ್ಲವೆ ? ಇನ್ನೂ ಹೇಳುವುದಾದರೆ ಭೂಮಿಯ ಮೇಲಿನ ಪ್ರತಿವಸ್ತುವೂ ಭೂಭ್ರಮಣದೊಂದಿಗೆ ಗಂಟೆಗೆ ಸಾವಿರ ಮೈಲಿನ ವೇಗದಲ್ಲಿ ಕದಲಿಕೊಂಡಿದೆ, ಕಲ್ಲು ಮಣ್ಣು ಮರಗಳೊಂದಿಗೆ !

**ಐಲೇಶ್ವರಪು ವೆಂಕಟ ಶ್ರೀಕೃಷ್ಣ, ಮಂಗಳಗಿರಿ (ಆಂಧ್ರ)**

ಪ್ರ: ಮುನಿಗಳು ಹುಲಿ ಚರ್ಮ, ಜಿಂಕೆಯ ಚರ್ಮಗಳ ಮೇಲೆ ಏಕೆ ಕುಳಿತುಕೊಳ್ಳುತ್ತಾರೆ ?

ಉ: ಮುನಿಗಳು ಅರಣ್ಯದಲ್ಲಿ ಆಶ್ರಮಗಳನ್ನು ಕಟ್ಟಿಕೊಂಡು ಅರಣ್ಯದಲ್ಲಿ ಸಿಗುವವುಗಳನ್ನೇ ತಿನ್ನುವವರು. ಅವರಿಗೆ ನೂಲು, ನೇಯಿಗೆ ಚಾಪೆ, ಮುಂತಾದ ಪರಿಶ್ರಮ ಸಾಧನಗಳೇನಿಲ್ಲ. ಮಾಂಸಕ್ಕಾಗಿ ಕೊಂದ ಮೃಗಗಳ ಚರ್ಮವನ್ನೇ ಚಾಪೆಯಂತೆ ಉಪಯೋಗಿಸಿಕೊಳ್ಳುವರು. ಒಂದು ದಶೆಯಲ್ಲಿ ಚರ್ಮಗಳನ್ನೇ ಬಟ್ಟೆಯಂತೆ ಉಪಯೋಗಿಸಿ ಕೊಳ್ಳುತ್ತಿದ್ದರು. ಶಿವನು ಆನೆಯ ಚರ್ಮವನ್ನು ಕಟ್ಟಿಕೊಳ್ಳುತ್ತಿದ್ದನು.




೩೮

### ಪ್ರಣಯ ಕಲಹಗಳ ಕಥೆ

ನಂದ ಮಹಾರಾಜನು ದೊಡ್ಡ ಸಾಮ್ರಾಜ್ಯವನ್ನು ಆಳಿದ ಚಕ್ರವರ್ತಿ. ದೊಡ್ಡ ದೊಡ್ಡ ರಾಜ ಮಹಾರಾಜರೆಲ್ಲಾ ಅವನಿಗೆ ಪಾದಾಕ್ರಾಂತರಾಗಿ ಹೋದರು. ಅವನ ಖ್ಯಾತಿ ಶರತ್ಕಾಲದ ಬೆಳದಿಂಗಳಿನಂತೆ ನಿಷ್ಕಲಂಕವಾಗಿತ್ತು. ಅವನ ಮಂತ್ರಿಯಾದ ವರರುಚಿ ಸಕಲ ಶಾಸ್ತ್ರ ಪಾರಂಗತನಾದ ಮಹಾ ಮೇಧಾವಿಯಾಗಿದ್ದನು.

ಒಂದು ದಿನ ಸಾಯಂಕಾಲ ವರರುಚಿಗೂ ಅವನ ಹೆಂಡತಿಗೂ ಮಾತುಕತೆಗಳ ಮಧ್ಯದಲ್ಲಿ ಪ್ರಣಯ ಕಲಹ ಹುಟ್ಟಿಕೊಂಡಿತು. ಅವನಿಗೆ ಹೆಂಡತಿಯೆಂದರೆ ಅತ್ಯಂತ ಪ್ರೇಮ. ಆದುದರಿಂದ ಅವನು ಸಾಧ್ಯವಾದಷ್ಟು ಬೇಗದಲ್ಲಿ ಅವಳೊಂದಿಗೆ ರಾಜೀಯಾಗಿ ಬಿಡಬೇಕೆಂದು ವಿಧವಿಧವಾಗಿ ಅವಳೊಂದಿಗೆ ಅಂಗಲಾಚಿ ನೋಡಿದನು. ಆದರಿಂದೇನೂ ಪ್ರಯೋಜನವಿಲ್ಲದೆ ಹೋಗಲು, ಕಡೆಗೆ ತುಂಬಾ ದೈನ್ಯತೆಯಿಂದ, "ಪ್ರಿಯಳೇ, ನಾನು ಏನು ಮಾಡಿದರೆ ನಿನ್ನ ಕೋಪ ಹೋಗುತ್ತದೆ ಹೇಳು. ಹಾಗೆಯೇ ಮಾಡುತ್ತೇನೆ" ಎಂದನು. ಅವಳು ಮಾತಾಡದೆ ಬಿಮ್ಮನೆ ಬಿಗಿಕೊಂಡಿರಲು, ಎರಡು ಮೂರು ಬಾರಿ ಹಾಗೆಯೇ ಪ್ರಾರ್ಥಿಸಿದನು. ಕಡೆಗೆ ಅವಳು "ನೀವು ತಲೆಬೋಳು ಮಾಡಿಕೊಂಡು ನನ್ನ ಪಾದಗಳ ಮೇಲೆ ಬಿದ್ದರೆ ಮಾತ್ರ ನಾನು ಯಾವಾಗಲಿನ ಹಾಗೆ ಪ್ರೇಮದಿಂದಿರುತ್ತೇನೆ" ಎಂದಳು.

ವರರುಚಿ ಅವಳ ಅಭಿಲಾಷೆಯಂತೆಯೇ ಮಾಡಿ ಅವಳ ಪ್ರಸನ್ನತೆಯನ್ನು ಸಂಪಾದಿಸಿಕೊಂಡನು. ಅದೇ ದಿನ ಸಾಯಂಕಾಲ ನಂದ ಮಹಾರಾಜನಿಗೂ ಅವನ ಹೆಂಡತಿಗೂ ನಡುವೆ ಏನೋ ಮಾತಿಗೆ ಮಾತಾಗಿ ಪ್ರಣಯ ಕಲಹಕ್ಕೆ ತಿರುಗಿತು. ಪ್ರಿಯ ಪತ್ನಿಯ ಕೋಪವನ್ನು ಹೋಗಲಾಡಿಸಲು ನಂದನು ಎಷ್ಟು ಪ್ರಯತ್ನಪಟ್ಟರೂ ಲಾಭವಿಲ್ಲದೆ ಹೋಯಿತು.

"ಹೀಗೆ ಮಾಡಿದರೆ ಹೇಗೆ ಪ್ರಿಯಳೇ? ನಿನ್ನ ನಗುಮುಖವನ್ನು ನೋಡದೆ ನಾನು ಒಂದು ಗಂಟೆ ಹೊತ್ತುಕೂಡಾ ಜೀವಿಸಿರಲಾರೆ. ನಿನ್ನ ಕಾಲು ಹಿಡಿಯುತ್ತೇನೆ. ದಯೆ ತೋರಿಸಲಾರೆಯಾ?" ಎಂದು ಬೇಡಿಕೊಂಡನು ನಂದರಾಜ.



"ಪ್ರಭೂ ! ನಮ್ಮ ಕೆಲಸವನ್ನು ಮಾಡಿಸಿಕೊಳ್ಳ ಬೇಕಾದರೆ ನಾವು ಹೇಳಬಾರದಂತಹ ಅನೇಕ ಕಾರ್ಯ ಗಳನ್ನು ಮಾಡಬೇಕಾಗುತ್ತದೆಂದು ತಮಗೂ ಗೊತ್ತೇ ಯಿದೆಯಷ್ಟೆ ? ನಾವೇನೂ ಮಾಡದೆ ಸುಮ್ಮನಿದ್ದರೆ ನಮ್ಮ ಕೆಲಸ ಆಗುವುದಿಲ್ಲವೆಂದೂ ತಾವು ಅರಿಯದ ವಿಷಯವಲ್ಲ" ಎಂದನು. ನಂದರಾಜನು ಮತ್ತೇನೂ ಮಾತಾಡಲಿಲ್ಲ.

ಕೋತಿ ಮೊಸಳೆಗೆ ಈ ಕಥೆಯನ್ನು ಹೇಳಿ, "ಮೂರ್ಖ ಮೊಸಳೆಯೇ ! ಅವರು ತಮ್ಮ ಹೆಂಡಂದಿರನ್ನು ತೃಪ್ತಿಪಡಿಸಿದುದರಿಂದ ಬೇರೆಯ ವರಿಗೆ ಹಾನಿಯಾಗಲಿಲ್ಲ. ಆದರೆ ನೀನು ಮಾತ್ರ ನಿನ್ನ ಮಿತ್ರನನ್ನೇ ಕೊಲ್ಲಲು ಸಿದ್ಧನಾದೆ. ಮೂರ್ಖ ನಾದುದರಿಂದ ಬಾಯಿಜಾರಿ ಹೇಳಿಬಿಟ್ಟರುವೆ. ಹೀಗೆ ಬಾಯಿಜಾರಿಸಿಕೊಂಡು ಸತ್ತ ಕತ್ತೆಗೂ ನಿನಗೂ ವ್ಯತ್ಯಾಸವೇನಿಲ್ಲ." ಎಂದಿತು.

"ಅದು ಯಾವ ಕತ್ತೆ ? ಏನು ಕಥೆ ?" ಎಂದು ಮೊಸಳೆ ಕೇಳಿತು. ಆ ಕಥೆಯನ್ನೂ ಹೇಳಿತು ಕೋತಿ:

### ಹುಲಿಚರ್ಮ ಹೊದೆದ ಕತ್ತೆಯ ಕಥೆ

ಒಂದು ಹಳ್ಳಿಯಲ್ಲಿ ಒಬ್ಬ ಅಗಸರವನಿದ್ದನು. ಅವನಿಗೊಂದು ಕತ್ತೆಯೂ ಇದ್ದಿತು. ಬಡವನಾದ ಅಗಸನು ಕತ್ತೆಯ ಹೊಟ್ಟೆ ತುಂಬಿಸಲಾಗದೆ ಕಷ್ಟ ಪಡುತ್ತಿದ್ದನು.

ಒಂದು ದಿನ ಅಗಸನು ಅರಣ್ಯದಲ್ಲಿ ಕಟ್ಟಿಗೆ ಅರಿಸಿ ಕೊಂಡು ತಿರುಗುತ್ತಿದ್ದಾಗ ಸತ್ತುಬಿದ್ದಿದ್ದ ಒಂದು ಹುಲಿ ಯನ್ನು ನೋಡಿದನು. ಅವನ ಮನಸ್ಸಿನಲ್ಲಿ ಒಂದು ಆಲೋಚನೆ ಬಂದಿತು : "ನನ್ನ ಕತ್ತೆಯ ಮೇಲೆ ಈ ಹುಲಿಯ ಚರ್ಮವನ್ನು ಹೊದೆದು. ರಾತ್ರಿಯಲ್ಲಿ ಹೊಲಗದ್ದೆಗಳಲ್ಲಿ ಬಿಟ್ಟುಬಿಟ್ಟರೆ, ಕಾವಲುಗಾರರು ಅದನ್ನು ನೋಡಿ ಹುಲಿ ಎಂದುಕೊಂಡು ಹೆದರಿ ಓಡಿ ಹೋಗುತ್ತಾರೆ. ಆಗ ಅದು ಹೊಟ್ಟೆ ತುಂಬ ಒಳ್ಳೆಯ ಬೆಳೆಯ ಪೈರು ಮೇದು ಪುಷ್ಟಿಪಡೆದು ಬಟ್ಟೆಗಳ

"ನನ್ನ ಆಸೆ ಈಡೇರಿಸಿರಿ ನೋಡುವಾ. ಬಾಯಿ ಯಲ್ಲಿ ಕಡಿವಾಣ ಇಟ್ಟುಕೊಂಡು ನನ್ನನ್ನು ಬೆನ್ನ ಮೇಲೆ ಕೂಡಿಸಿಕೊಂಡು ಕುದುರೆಯ ಹಾಗೆ ಸಕಿಲಿ ಸುತ್ತ ಇಲ್ಲಿಂದಲ್ಲಿಗೆ ಅಲ್ಲಿಂದಿಲ್ಲಿಗೆ ನನಗೆ ಸವಾರೀ ಕೊಡುವಿರಾ ?" ಎಂದಳು ನಂದನ ಪತ್ನಿ. ನಂದನು ಕೂಡಲೇ ಅವಳ ಆಸೆಯನ್ನು ನೆರವೇರಿಸಿದನು.

ಮರುದಿನ ವರರುಚಿ ರಾಜನ ದರಬಾರಿಗೆ ಬಂದಾಗ ಅವನ ಗುಂಡುತಲೆಯನ್ನು ನೋಡಿ ನಂದರಾಜನು ಮುಗುಳುನಗುತ್ತ, ಅವನನ್ನು ಅವಹೇಳನೆ ಮಾಡಲಿ ಕ್ಕಾಗಿ, "ಓ ! ವರರುಚೀ, ಒಳ್ಳೆಯ ದಿನ ಯಾವು ದೆಂದು ಕೂಡಾ ನೋಡದೆ ಹೀಗೆ ತಲೆಬೋಳಿಸಿಕೊಂಡೆ ಯಲ್ಲಾ ! ಏನಿದು ?" ಎಂದನು. ಗೂಢಚಾರರ ಮೂಲಕವಾಗಿ ವರರುಚಿಯ ತಲೆಬೋಳಾದುದರ ಕಾರಣ ರಾಜನಿಗೆ ಈ ಮೊದಲೇ ಗೊತ್ತಾಗಿತ್ತು.

ಆದೇ ರೀತಿ ನಂದರಾಜನ ಅಂತಃಪುರದ ರಹಸ್ಯ ವನ್ನೂ ಆಗಲೇ ಅರಿತುಕೊಂಡಿದ್ದ ವರರುಚಿ,

ದೊಡ್ಡ ದೊಡ್ಡ ಮೂಟೆ ಸುಲಭವಾಗಿ ಹೊರುತ್ತದೆ." ಹೀಗೆಂದುಕೊಂಡು ಅವನು ಆ ಹುಲಿಯ ಚರ್ಮವನ್ನು ಸುಲಿದು ತಂದು ತನ್ನ ಕತ್ತೆಯ ಮೇಲೆ ಹೊದೆದು, ತನ್ನ ಉಪಾಯವನ್ನು ನೆರವೇರಿಸಿಕೊಂಡನು. ರಾತ್ರಿಯಲ್ಲಿ ಹೊಲದ ಕಾವಲುಗಾರರು ಆ ಕತ್ತೆಯನ್ನು ನೋಡಿ ಹುಲಿಯೇ ಅಂದುಕೊಂಡು ಅದನ್ನು ಓಡಿಸಲು ಹೆದರಿ ತಾವೇ ಓಡಿದರು. ಆದುದರಿಂದ ಕತ್ತೆ ಬೆಳತನಕ ಹೊಲಗಳಲ್ಲಿ ಹೊಟ್ಟೆ ತುಂಬ ಮೇದು ಬೆಳಗಾಗುವಾಗ ಮನೆಗೆ ಬರುತ್ತಿತ್ತು. ಹೀಗೆ ದಿನಾ ಒಂದೊಂದು ಕಡೆಯ ಹೊಲಗಳಲ್ಲಿ ಹೊಟ್ಟೆ ತುಂಬಿಸುತ್ತ ಬಲಿತು ಗುಂಡು ಗುಂಡಾಯಿತು.

ಒಂದು ದಿನ ರಾತ್ರಿ ಅದು ಮೇಯುತ್ತಿದ್ದಾಗ ದೂರದಲ್ಲಿ ಮೇಯುವ ಹೆಣ್ಣು ಕತ್ತೆ ಓಂಡ್ರಿಸಿದ ಶಬ್ದವನ್ನು ಕೇಳಿ, ಸೊಕ್ಕು ಕೆರಳಿ ತಾನು ಕೂಡಾ ಗಟ್ಟಿಯಾಗಿ ಓಂಡ್ರಿಸತೊಡಗಿತು. ಅದನ್ನು ಕೇಳಿ ರೈತರು ಅದು ಹುಲಿಚರ್ಮ ಹೊದೆದ ಕಳ್ಳಕತ್ತೆ ಎಂದು ತಿಳಿದು ಅದನ್ನು ಹಿಡಿದು ಸಾಯುವ ಹಾಗೆ ಹೊಡೆದು ಓಡಿಸಿದರು.

ಕೋತಿ ಈ ಕತ್ತೆಯ ಕಥೆಯನ್ನು ಹೇಳಿ ಮುಗಿಸುವಾಗ, ಯಾವುದೋ ಒಂದು ನೀರಿನ ಪ್ರಾಣಿ ಮೊಸಳೆಯ ಹತ್ತಿರ ಬಂದು, "ಅಯ್ಯಾ, ಕರಾಳಮುಖಾ! ನಿನ್ನ ಹೆಂಡತಿ ತಿನ್ನಲಿಕ್ಕೆ ಏನೂ ಇಲ್ಲದೆ. ಆತ್ಯಾತುರದಿಂದ ನಿನ್ನ ದಾರಿಯನ್ನು ನೋಡುತ್ತಾ, ಎಷ್ಟು ಹೊತ್ತಾದರೂ ನೀನು ಬಾರದಿರುವುದನ್ನು ನೋಡಿ, ನಿರಾಶೆಯಿಂದ, ಅಸೂಯೆಯಿಂದ ಆತ್ಮಹತ್ಯಮಾಡಿಕೊಂಡಳು" ಎಂದು ಹೇಳಿತು.

ಆ ಮಾತು ಕೇಳಿ ಕರಾಳಮುಖವು ದುಃಖದಿಂದ, "ಅಯ್ಯೋ! ನಾನು ಎಂತಹ ದುರ್ಭಾಗ್ಯದವನೋ! ಎಂಥಾ ಕಷ್ಟಕ್ಕೆ ಬಿದ್ದೆನಲ್ಲಾ! ಇನ್ನು ನನ್ನ ಮನೆ ಮನೆಯೇ ಅಲ್ಲ. ಒಳ್ಳೆಯವನಿಗೆ ಹೆಂಡತಿಯೇ ಮನೆ. ಹೆಂಡತಿಯಿಲ್ಲದ ಮನೆ ಬರೇ ಬಂಜರುನೆಲ. ಹೆಂಡತಿ



ಪಕ್ಕದಲ್ಲಿದ್ದರೆ ಮರದ ಬೊಡ್ಡೆಯ ಬುಡದಲ್ಲಾದರೂ ತುಂಬಾ ಆನಂದವಾಗಿರುತ್ತದೆ. ಹೆಂಡತಿ ಇಲ್ಲದ ರಾಜಭವನವಾದರೂ ಮರುಭೂಮಿಗೆ ಸಮಾನವೇ" ಎಂದುಕೊಂಡು ಕೋತಿಯೊಂದಿಗೆ, "ಮಿತ್ರಾ! ನಾನು ನಿನಗೆ ಮಾಡಿದ ದ್ರೋಹವನ್ನು ಕ್ಷಮಿಸಯ್ಯಾ. ನನಗಿನ್ನು ಯಾವ ಆಶೆಯೂ ಇಲ್ಲ. ಸೀದಾ ಹೋಗಿ ಹೆಂಡತಿಯ ಚಿತೆಯಲ್ಲಿಯೇ ಬಿದ್ದು ಪ್ರಾಣ ಕಳೆದುಕೊಳ್ಳುತ್ತೇನೆ. ಅಪ್ಪಣೆ!" ಎಂದಿತು.

ಅದನ್ನು ಕೇಳಿ ಕೋತಿ, "ನೀನು ನಿನ್ನ ಹೆಂಡತಿಗೆ ದಾಸನೆಂದೂ, ಅವಳು ಬೆರಳಿನ ತುದಿಯಲ್ಲಿ ನಿನ್ನನ್ನು ಆಡಿಸುವವಳೆಂದೂ ನನಗೆ ಮೊದಲಿನಿಂದಲೂ ಗೊತ್ತಿತ್ತು. ಈಗ ನೀನು ಆ ಸಂಗತಿಯನ್ನು ಇನ್ನಿಷ್ಟು ದೃಢಪಡಿಸಿದೆ. ಎಲೋ ಮೂಢನೇ, ಇದಕ್ಕಾಗಿ ಸಂತೋಷ ಪಡುವುದನ್ನು ಬಿಟ್ಟು ದುಃಖಿಸುವುದೆಂದರೇನು? ಅಂತಹ ಹೆಂಡತಿ ಹೋದುದನ್ನು ಹಬ್ಬವೆಂದು ಆಚರಿಸಬೇಕು. ಅಂತಹ ಹೆಂಡತಿ

ಯೊಂದಿಗೆ ಶಾಂತಿಯೆಂಬುದು ಸ್ವಲ್ಪವೂ ಇರದು. ಅಂಥವಳನ್ನು ದಂಡಿಸಿ ಅಥವಾ ಬಹುಮಾನ ಕೊಟ್ಟು ಮೆಚ್ಚಿಸಿಯೇ ದಾರಿಗೆ ತರಬೇಕಾಗುತ್ತದೆ. ಅಂತಹ ಹಾಳು ಗುಣದ ಹೆಂಡತಿಗಾಗಿ ಆತ್ಮಹತ್ಯ ಮಾಡಿಕೊಳ್ಳುವೆಯಾ? ಅದು ಮಹಾಮೂರ್ಖತನ! ಬೇಡ ಬೇಡ!" ಎಂದಿತು.

"ಮಿತ್ರನೇ, ನೀನು ಹೇಳಿದ್ದು ಬಹಳ ಮಟ್ಟಿಗೆ ನಿಜವೇ, ಆದರೆ ನಾನೇನು ಮಾಡಲಿ? ನನ್ನ ಹೆಂಡತಿಯನ್ನು ಕಳೆದುಕೊಂಡದ್ದಾಯಿತು. ಮನೆ ಹಾಳು ಬಿದ್ದುಹೋಯಿತು. ನಿನ್ನ ಸ್ನೇಹವೂ ಹೋಯಿತು. ಹಿಂದಿನ ಒಬ್ಬ ರೈತನ ಹೆಂಡತಿಯ ಹಾಗೆ ನಾನು ಉಭಯ ಭ್ರಷ್ಟನಾದೆನು" ಎಂದಿತು ಮೊಸಳೆ.

"ಅದೇನು ಕಥೆ?" ಎಂದು ಕೋತಿ ಕೇಳಿತು. ಮೊಸಳೆ ಆ ಕಥೆಯನ್ನು ಹೇಳಿತು:

### ರೈತನ ಹೆಂಡತಿಯ ಕಥೆ

ಪೂರ್ವದಲ್ಲಿ ಒಬ್ಬ ರೈತನು, ಊರಿಗೆ ದೂರವಾಗಿದ್ದ ತನ್ನ ವ್ಯವಸಾಯ ಕ್ಷೇತ್ರದಲ್ಲಿ ಸುಂದರಿಯಾದ ಹೆಂಡತಿಯೊಂದಿಗೆ ಸಂಸಾರ ಮಾಡಿಕೊಂಡಿದ್ದನು. ಅವರಿಗೆ ಮಕ್ಕಳಿರಲಿಲ್ಲ. ರೈತನು ಪ್ರಾಯಮೀರಿದವನಾಗಿದ್ದನು. ಹೆಂಡತಿ ಚಿಕ್ಕ ವಯಸ್ಸಿನವಳು. ಆದುದರಿಂದ ಅವಳು ತನ್ನ ಈಡಿಗೆ ಸರಿಹೋಗುವ ಯುವಕನನ್ನು ಹುಡುಕುತ್ತಿದ್ದಳು.

ಅವಳ ಮೇಲೆ ಕಣ್ಣಿಟ್ಟಿದ್ದ ದುಷ್ಟನೊಬ್ಬ, ಅವಳ ಅಂತರಂಗವನ್ನು ಕಂಡು ಹಿಡಿದು ಒಂದು ದಿನ ಅವಳನ್ನು ಸಂಧಿಸಿ, "ನಿಜವಾಗಿಯೂ ನಿನ್ನ ಸೌಂದರ್ಯಕ್ಕೆ ಈಡು ಜೋಡಿಲ್ಲ. ನಿನ್ನನ್ನು ನೋಡಿದ ಕ್ಷಣದಿಂದಲೇ ನನ್ನ ಹೃದಯದಲ್ಲಿ ಪ್ರೇಮ ಉಕ್ಕಿತು. ಇತ್ತೀಚೆಗಷ್ಟೇ ನನ್ನ ಹೆಂಡತಿ ಸತ್ತು ಹೋದದ್ದು. ನಾನು ನನ್ನವರು ಎನ್ನಲು ಯಾರೂ ಇಲ್ಲದ ಏಕಾಂಗಿ. ಈಗ ನಿನ್ನ ಪ್ರೇಮದಲ್ಲಿ ಸಿಕ್ಕಿ ಬಿದ್ದೆ. ನಿನಗೆ ಇಷ್ಟವಿದ್ದರೆ ನನ್ನನ್ನು ಬದುಕಿಸು" ಎಂದನು.

ಅವಳು ಸಂತೋಷದಿಂದ, "ನಿನಗೆ ಅಷ್ಟು ನನ್ನ ಮೇಲೆ ಪ್ರೇಮವಿದ್ದರೆ ನನಗೇನೂ ಅಭ್ಯಂತರವಿಲ್ಲ. ಆದರೆ ನಾವು ಇಲ್ಲಿಂದ ಎತ್ತಾದರೂ ಹೋಗಿ ಬಿಡಬೇಕು. ನನ್ನ ಗಂಡ ಪೆಟ್ಟಿಗೆಯೊಳಗೆ ಧಂಡಿಯಾಗಿ ಹಣವನ್ನಿಟ್ಟಿದ್ದಾನೆ. ಅದನ್ನೂ ತರುತ್ತೇನೆ. ಅದರಿಂದ ನಾವು ಸುಖವಾಗಿ ಬದುಕಿರಬಹುದು" ಎಂದಳು.

"ಒಳ್ಳೆಯದು. ನಿನ್ನ ಗಂಡ ನಿದ್ದೆ ಮಾಡಿದ ಮೇಲೆ ಈ ರಾತ್ರಿಯೇ ಎಲ್ಲಾ ಕಟ್ಟಿಕೊಂಡು ನನ್ನ ಹತ್ತಿರ ಬಂದುಬಿಡು" ಎಂದ ಆ ದುಷ್ಟ. ಅವಳೂ ಅದಕ್ಕೆ ಒಪ್ಪಿ, ಆ ರಾತ್ರಿ ಗಂಡನು ನಿದ್ದೆಯಲ್ಲಿರುವಾಗ ಹಣವನ್ನೆಲ್ಲ ತೆಗೆದುಕೊಂಡು ಸಂಕೇತ ಸ್ಥಾನಕ್ಕೆ ಹೊರಟು ಹೋದಳು. ಅಲ್ಲಿ ಕಾದಿದ್ದ ದುಷ್ಟನು ಸಂತೋಷದಿಂದ ನೃತ್ಯ ಮಾಡುತ್ತ ಅವಳೊಂದಿಗೆ ಹೊರಟನು.





# ಸ್ವರ ಪರೀಕ್ಷೆ

ಪಟ್ಟು ತಪ್ಪಿ ಪರಾರಿಯಾದ ಬೇತಾಳವನ್ನು ಹಿಡಿದು ತರುವ ಪಟ್ಟುಗಾರ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ. ಕೊಂಬೆಯಲ್ಲಿ ನೇತಾಡುವ ಶವವನ್ನು ಕೆಳಗಿಳಿಸಿ ತನ್ನ ಹೆಗಲಿನ ಮೇಲೆ ಹಾಕಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಸೇರಿದ ಬೇತಾಳವು ಮಾತಾಡಲು ತೊಡಗಿ. "ಎಲೈ ಮಹಾರಾಜನೇ. ಈ ಪ್ರಪಂಚದಲ್ಲಿ ಯಾವುದರ ಬೆಲೆಯನ್ನಾದರೂ ನಿರ್ಣಯಿಸಿ ಹೇಳುವುದು ಅಸಾಧ್ಯವೆಂದೇ ಕಾಣುತ್ತದೆ. ನಿನ್ನನ್ನೇ ನೋಡಿಕೋ. ನಿನ್ನ ಸಾಹಸಕ್ಕೂ ಶ್ರಮಕ್ಕೂ ಇರುವ ಬೆಲೆ ಎಷ್ಟೆಂದು ನಿರ್ಣಯಿಸಲು ಸಾಧ್ಯವೇ ? ಯಾವುದಾದರೂ ಅತೀತ ಶಕ್ತಿಗೇ ಬೆಲೆ ನಿರ್ಣಯ ಮಾಡಲು ಹೇಳಿದರೂ ಫಲಿತವು ಶೂನ್ಯವೆಂಬುದಕ್ಕೆ ನಿದರ್ಶನವಾಗಿ. ಸಂಗೀತ ಪ್ರಿಯನಾದ ಕಾಂತಿವರ್ಮನೆಂಬ ರಾಜನು ಪಡೆದ ವಿಚಿತ್ರ ಅನುಭವವನ್ನು ಕುರಿತು ಹೇಳುತ್ತೇನೆ. ಕೇಳುತ್ತಾ ನಡೆ." ಎಂದು ಹೀಗೆ ಹೇಳತೊಡಗಿತು: ವಸಂತದೇಶವನ್ನು ಆಳುತ್ತಿದ್ದ ರಾಜಾ ಕಾಂತಿವರ್ಮನು ಸಂಗೀತದ ಮೇಲೆ ತುಂಬಾ ಪ್ರಿಯ

## ಬೇತಾಳ ಕಥೆಗಳು...



ವುಳ್ಳವನು. ಅವನು ದಿನಾ ಸಂಗೀತವನ್ನು ಆನಂದಿಸಲು ಏನು ಮಾಡಬೇಕೆಂದು ಆಲೋಚಿಸಿಕೊಂಡಿದ್ದನು. ಆದರೆ ಒಬ್ಬನೇ ಸಂಗೀತಗಾರನು ಅವನಿಗಾಗದು. ಒಂದು ದಿನ ಹಾಡಿದವನಿಂದ ಇನ್ನೊಮ್ಮೆ ಹಾಡಿಸಿ ಕೇಳಲಾರನು.

ಕಾರಣವೇನೆಂದರೆ, ಯಾರ ಹಾಡು ಕೇಳಿದರೂ ಅವರ ಕಂಠಸ್ವರದಲ್ಲಿ ಏನೋ ಒಂದು ಲೋಪವಿರುವಂತೆ ಅವನಿಗೆ ಕಾಣುತ್ತಿತ್ತು. ಮುಖ್ಯವಾಗಿ ಹಾಡುವವನ ಕಂಠಸ್ವರವು ಸುಶ್ರಾವ್ಯವಾಗಿರಬೇಕೆಂದು ಬಯಸುವನು. ಆದರೆ ಯಾರ ಕಂಠಸ್ವರ ಎಷ್ಟು ಸುಶ್ರಾವ್ಯವೆಂದು ಸಭಿಕರಿಗೂ ನಿರ್ಧರಿಸಲಾಗಲಿಲ್ಲ. ರಾಜನಿಗೂ ಅಷ್ಟೇ! ಎಂಥ ಸುಶ್ರಾವ್ಯ ಸಂಗೀತದಲ್ಲಿಯೂ ರಾಜನಿಗೆ ಏನೋ ಲೋಪವೇ ತೋರಿ ಅತೃಪ್ತಿಯಾಗುತ್ತಿತ್ತು.

ದಿನಾ ಸಂಗೀತ ಕಛೇರಿ ಮಾತ್ರ ನಡೆಯುತ್ತಿತ್ತು. ದಿನಾ ಒಬ್ಬೊಬ್ಬ ಹೊಸ ಸಂಗೀತ ವಿದ್ವಾಂಸನು ಬಂದು ಹಾಡುತ್ತಿದ್ದನು. ಕೆಲವರ ಕಂಠಸ್ವರವು ಕರ್ಕಶವಾಗಿದ್ದು ರಾಜನನ್ನೂ, ಸಭಿಕರನ್ನೂ ಬಾಧೆಗೊಳಿಸುತ್ತಿತ್ತು. ಆದರೂ ರಾಜನು ಸಂಗೀತದ ಪ್ರೀತಿಯನ್ನು ಬಿಡಲಾಗದೆಹೋದನು.

ಹೀಗಿರುವಾಗ ಒಂದು ದಿನ ರಾತ್ರಿ ಕಾಂತಿವರ್ಮನ ಕನಸಿನಲ್ಲಿ ಸರಸ್ವತಿದೇವಿ ಕಾಣಿಸಿ, "ಎಲೈ ಕಾಂತಿವರ್ಮ ಮಹೀಪಾಲನೇ, ನಿನ್ನ ಸಂಗೀತಾರಾಧನೆಯಿಂದ ನಾನು ತುಂಬಾ ಪ್ರೀತಳಾದೆನು. ನೀನು ದಕ್ಷಿಣ ದಿಕ್ಕಿನಲ್ಲಿರುವ ಅರಣ್ಯದೊಳಗೆ ಹೋಗಿ, ಆಲದ ಮರದ ಕೆಳಗೆ ನಾನು ನಿನಗಾಗಿ ಇಟ್ಟಿರುವ ವೀಣೆಯನ್ನು ತೆಗೆದುಕೊಂಡು ಬಾ. ಅದರ ಉಪಯೋಗವೇನೆಂದರೆ, ಅದನ್ನು ಇದಿರಿನಲ್ಲಿಟ್ಟುಕೊಂಡು ಯಾರಾದರೂ ಹಾಡಿದರೆ ಅವರ ಕಂಠಸ್ವರವು ಹೇಗಿದೆ ಎಂದು ಅದು ಹೇಳಿಬಿಡುತ್ತದೆ. ಅಷ್ಟೇ ಅಲ್ಲ, ಹಾಡಿದವರು ತಮ್ಮ ಕಂಠಸ್ವರಕ್ಕೆ ಅನುಗುಣವಾದ ರೂಪವನ್ನು ಕೂಡಾ ಪಡೆಯುತ್ತಾರೆ." ಎಂದು ಹೇಳಿ ಅದೃಶ್ಯಳಾದಳು.

ನಿದ್ರೆಯಿಂದೆದ್ದ ಮೇಲೆ ರಾತ್ರಿಯಲ್ಲಿ ತಾನು ಕಂಡ ಕನಸನ್ನು ನೆನೆದನು. ಅದು ನಿಜವೋ ಸುಳ್ಳೋ ಎಂಬ ಸಂದೇಹ ಸುಳಿಯಿತು. ಸಂದೇಹ ನಿವೃತ್ತಿಗಾಗಿ ನೋಡಿಬಿಡಬೇಕೆಂದುಕೊಂಡು ಸರಸ್ವತೀದೇವಿ ಹೇಳಿದ ದಕ್ಷಿಣ ದಿಕ್ಕಿನ ಕಾಡಿನೊಳಗೆ ಹೋದನು. ಅಲ್ಲಿದ್ದ ಒಂದೇ ಒಂದು ಆಲದ ಮರವು ಬೇಗನೇ ಸಿಕ್ಕಿತು. ಅದರ ಬುಡದಲ್ಲಿ ವೀಣೆಯೊಂದು ಫಳಫಳ ಹೊಳೆಯಿತು. ಆಶ್ಚರ್ಯವೂ ಸಂತೋಷವೂ ಒಮ್ಮೆಗೇ ಆಯಿತು ರಾಜನಿಗೆ.

ಅವನು ಆ ವೀಣೆಯನ್ನು ತೆಗೆದುಕೊಂಡು ಅರಮನೆಗೆ ತಂದು, ಪುಷ್ಪಗಳಿಂದ ಪೂಜಿಸಿ ಸಂಗೀತದ ಸಭೆ ನಡೆಯುವ ಚಾವಡಿಯ ಮಧ್ಯಭಾಗದಲ್ಲಿ ಇರಿಸಿದನು. ಆ ಮೇಲೆ ಆ ದಿನದಿಂದ ಹಿಡಿದು ರಾಜನ ಸುಮುಖದಲ್ಲಿ ಹಾಡಲು ಬಂದವನಿಗೆ,

ಮೊದಲು ಆ ವೀಣೆಯ ಮಹತ್ವವನ್ನು ಕುರಿತು ವಿವರಿಸಿ ಹೇಳಲಾಗುತ್ತಿತ್ತು. ಹಾಡು ಮುಗಿದ ಕೂಡಲೇ ವೀಣೆ ತನ್ನ ಅಭಿಪ್ರಾಯವನ್ನು ಹೇಳಿಬಿಡುತ್ತದೆ. ಆ ಕೂಡಲೇ ಅದು ಹೇಳುವ ಅಭಿಪ್ರಾಯಕ್ಕೆ ಅನುಗುಣವಾದ ರೂಪ ಹಾಡಿದವನಿಗೆ ಬಂದುಬಿಡುತ್ತದೆ. ಕುತೂಹಲವಿರುವಷ್ಟೇ ಭಯವನ್ನೂ ಹೊರಡಿಸುವ ವೀಣೆಯದು !

ಈ ಎಚ್ಚರಿಕೆಯನ್ನು ಅರ್ಥ ಮಾಡದೆಯೋ. ಲಕ್ಷ್ಯ ಮಾಡದೆಯೋ ಮೊದಲು ಒಬ್ಬ ಸಂಗೀತಗಾರನು ಹಾಡಿದನು.

ಅವನನ್ನು ಕುರಿತು ವೀಣೆ, "ಗಾರ್ದಭಸ್ವರ" ಎಂದು ಹೇಳಿತು. ಕೂಡಲೇ ಆ ಗಾಯಕನು ಕತ್ತೆಯಾಗಿ ಬದಲಾಯಿಸಿ. ಕತ್ತೆಯಂತೆ ಓಂಡ್ರಿಸುತ್ತಾ ಸಭೆಯಿಂದ ಓಡಿ ಹೋದನು.

ಇದು ನಡೆದ ಮೇಲೆ ಮೂರು ದಿನಗಳ ವರೆಗೆ ಸಂಗೀತ ವಿದ್ವಾಂಸರು ವೀಣೆಗೆ ಹೆದರಿ ಸಂಗೀತ ಕಛೇರಿ ನಡೆಸುವ ಸಾಹಸಕ್ಕೆ ಮುಂದೆ ಬರಲಾರದೆಹೋದರು.

ಆದರೆ ನಾಲ್ಕನೇ ದಿನ ಗಾನಕಳಾಕೋವಿದನೆಂದು ಬಿರುದಾಂಕಿತನಾದವನೊಬ್ಬನು ಬಂದು. ವೀಣೆಯ ಮುಂದೆ ಹಾಡಿದನು. ಅವನು ಹಾಡುವುದನ್ನು ನಿಲ್ಲಿಸಿದ ಕೂಡಲೇ ವೀಣೆ "ಮಹಿಷಾಸ್ವರ" ಎಂದಿತು. ಕೂಡಲೇ ಆ ಗಾನಕಳಾಕೋವಿದನು ಕೋಣವಾಗಿ ಬದಲಾಯಿಸಿ. ಕೂಗುತ್ತಾ ಓಡಿ ಹೋದನು.

ಅದರ ಮಾರುದಿನ ಮತ್ತೊಬ್ಬನು ವೀಣೆಯಿಂದ ತನಗೇನೂ ಆಕ್ಷೇಪಣೆಬಾರದೆಂಬ ನಂಬುಗೆಯಲ್ಲಿ ಸಾಹಸದಿಂದ ಹಾಡಿದನು. "ಶ್ವಾನಗಾನಸ್ವರ" ಎಂದು ವೀಣೆಯಿಂದ ಅಭಿಪ್ರಾಯ ಹೊರಟಿತು. ಮರುಕ್ಷಣ ಆ ಸಂಗೀತಗಾರನು ನಾಯಿಯ ರೂಪ ತಾಳಿ ಬೊಗಳುತ್ತಾ ಸಭೆಯಿಂದ ಓಡಿ ಹೋದನು.

ಇದನ್ನೆಲ್ಲಾ ನೋಡಿ ರಾಜಕುಮಾರಿ ಕಲಕಂಠಿಗೆ ಮಹಾರೋಷ ಬಂತು. ಈ ಸಾರಿ ಅವಳು ಆ ವೀಣೆಯ ಮುಂದೆ ಕುಳಿತು ಹಾಡಿದಳು. ಅವಳ ಕಂಠಸ್ವರವು ಅತ್ಯಂತ ಮಧುರವಾಗಿದ್ದು ಸಭಿಕರನ್ನು ತನ್ಮಯಗೊಳಿಸಿತು. ಅವಳು ಹಾಡಿ ಮುಗಿಸಿದ



ಮೇಲೆ ವೀಣೆ, "ಕೋಕಿಲಸ್ವರ" ಎಂದು ಹೇಳಿತು. ಕೂಡಲೇ ರಾಜಕುಮಾರಿ ಕೋಗಿಲೆಯಾಗಿ ಬದಲಾಯಿಸಿ ಕುಹೂ ಕುಹೂ ಕೂಗುತ್ತ ಅಲ್ಲಿಂದ ತುರ್ರನೆ ಹಾರಿ ಹೋದಳು.

ಇದನ್ನು ನೋಡಿ ರಾಜನೂ ಸಭೆಯಲ್ಲಿದ್ದವರೂ ಆಗ್ರಹಾವೇಶಗೊಂಡು ಆ ವೀಣೆಯ ಮೇಲೆ ಬಿದ್ದು ಅದನ್ನು ಛಿನ್ನಾಭಿನ್ನ ಮಾಡಿಬಿಟ್ಟರು. ಆಗಲೂ ರಾಜನ ಕೋಪವು ಶಾಂತವಾಗದೆ ಆ ವೀಣೆಯ ಚೂರುಗಳನ್ನು ಸುಟ್ಟು ಬೂದಿ ಮಾಡಿಹಾಕಿದನು. ಆ ಕೂಡಲೇ ವೀಣೆಯ ಮೂಲಕವಾಗಿ ರೂಪ ಬದಲಾವಣೆ ಹೊಂದಿದವರಿಗೆಲ್ಲಾ ಮೊದಲಿನ ರೂಪಗಳೇ ಬಂದುಬಿಟ್ಟುವು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಇದೇನು ವಿಪರೀತ! ಸಾಕ್ಷಾತ್ ಸರಸ್ವತೀದೇವಿ ಪ್ರಸಾದಿಸಿದ ವೀಣೆಯಿಂದ ಸಂಗೀತಪ್ರಿಯನಾದ ರಾಜನಿಗೆ ಕಿಂಚಿತ್ತೂ ಉಪಯೋಗವಿಲ್ಲದೆ ಹೋದುದರ ಮೇಲೆ ಎಂಥ ವಿಪರೀತ ನಡೆದುಬಿಟ್ಟಿತು? ಈ ಅನರ್ಥಗಳಿಗೆ ಮೂಲ ಕಾರಣವೇನೆಂದು ನಿನಗೆ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆ ಒಡೆದೇ ಹೋಗುತ್ತದೆ!" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಕಾಂತಿವರ್ಮನು ಸಂಗೀತಪ್ರಿಯನೆಂದು ಹೇಳಲು ಯಾವ ಆಧಾರವೂ ಇಲ್ಲ. ಅವನ ಸಂಗೀತ ಲೋಲುಪತೆಯೆಂಬುದು ಒಂದು ವ್ಯಸನವೆಂದೇ ಹೇಳಬೇಕಾಗುತ್ತೆ. ಮದ್ಯ ಸೇವನೆಯ ವ್ಯಸನ ಹಿಡಿದವನು ಅದನ್ನು ಕುಡಿದುಬಿಡುವ ಹಾಗೆ, ಕಾಂತಿವರ್ಮನು ಹಾಡುತ್ತೇನೆಂದು ಬಂದ ಪ್ರತಿಯೊಬ್ಬನಿಂದ ಹಾಡು ಹೇಳಿಸಿ, ಅದರಲ್ಲೇನೋ ಕೊರತೆ ಇದೆಯೆಂದುಕೊಂಡು ಸಂಕಟಪಡುತ್ತಿದ್ದನೇ ಹೊರತು. ಒಳ್ಳೆಯ ಸಂಗೀತಪ್ರಿಯನಾದರೆ ಯಾವುದೋ ಒಂದು ಒಪ್ಪಲೇ ಬೇಕಿತ್ತು. ಕಡೆಗೆ ಅವನಿಗೆ ಸ್ವಪ್ನದಲ್ಲಿ ಸರಸ್ವತೀದೇವಿಯೇ ಕಾಣಿಸಿ, ಜ್ಞಾನೋದಯ ಮಾಡಿಸಲಿಕ್ಕಾಗಿ ಆ ವೀಣೆಯನ್ನು ಕೊಟ್ಟಳು. ಕಂಠ ಮಾಧುರ್ಯವನ್ನು ನಿರ್ಣಯಿಸಲು ರಸಜ್ಞನ ಕಿವಿಗಿಂತಲೂ ಹೆಚ್ಚಿನದೇನಿಲ್ಲ. ಹಾಡಿನಲ್ಲಿರುವ ಶ್ರಾವ್ಯತೆಯನ್ನು ಅಳೆಯಲು ಕೃತ್ರಿಮ ಸಾಧನಗಳಿಂದ ಸಾಧ್ಯವಾಗದು. ವಿಪರೀತಗಳಿಂದ ಇದು ಗೊತ್ತಾಗಿ ಕಾಂತಿವರ್ಮನಿಗೆ ಬುದ್ಧಿ ಬಂದುದರಿಂದಲೇ ವೀಣೆಯಿಂದಾದ ಅನಾಹುತ ಸರಿಯಾಯಿತು. ಒಳ್ಳೆಯ ಸಂಗೀತಪ್ರಿಯತೆಯೇ ಒಳ್ಳೆಯದೆಂದೂ, ಸರಸ್ವತೀದೇವಿ ನಿದರ್ಶನ ಮಾಡಿಸಿದಳು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡಿತು,





# ಸ್ವರ್ಗಮಾರ್ಗ

ಪರರಿಗೆ ಉಪಕಾರ ಮಾಡುವವನಾದ ಚಿನ್ನಪ್ಪನು ಮಂಗಳಪುರವೆಂಬ ಊರನ್ನು ಸಮೀಪಿಸಿಕೊಂಡಿರುವಾಗ ಅವನಿಗೆ ವಿಚಿತ್ರವಾದ ದೃಶ್ಯವು ಕಂಡಿತು. ಊರ ಹೊರಗಿರುವ ಗದ್ದೆಗಳೆಲ್ಲಾ ಪೈರುಗಳ ಜಾಡೇ ಇಲ್ಲದೆ, ಒಣಗಿ ಒಡಕುಗಳಿಂದ ಕೂಡಿದ್ದುವು. ಒಂದೆರಡು ಗದ್ದೆಗಳ ಪೈರುಗಳು ಒಣಗಿ ನೆಲಕ್ಕೊರಗಿದ್ದುವು, ಆ ಗದ್ದೆಗಳ ಪಕ್ಕದಲ್ಲಿರುವ ದೊಡ್ಡದೊಂದು ಕೆರೆಯಲ್ಲಿ ನೀರು ಮಾತ್ರ ತುಂಬಾ ಇದೆ. ಅದರಾಚೆಗೆ ದೂರದಲ್ಲಿ ಕಾಣುವ ಹೊಲಗಳು ಹಸಿರಾಗಿ ಕಳೆಗೊಂಡು ಬೆಳಗುತ್ತಿವೆ. ಇನ್ನೂ ಸ್ವಲ್ಪ ಮುಂದಕ್ಕೆ ಹೋಗಲು ಇನ್ನೊಂದು ವಿಪರೀತ ದೃಶ್ಯ ನೋಡಿದನು. ಒಂದು ದೊಡ್ಡ ತೋಟದಲ್ಲಿ ಮಾವು, ಹುಣಿಸೆ ಮೊದಲಾದ ಮರಗಳಿಗೆ ಓಳಿ ತೆಗೆದು ಕೆಲವು ಮನುಷ್ಯರು ನೀರು ಹರಿಸುತ್ತಿದ್ದಾರೆ.

"ಇದೇನು ! ಈ ಊರಿನವರಿಗೆ ಬುದ್ಧಿ ಸರಿಯಾಗಿಲ್ಲವೇ ? " ಎಂದುಕೊಳ್ಳುತ್ತ ಚಿನ್ನಪ್ಪನು. ಆಚೆ ಕಡೆ ಹೊಲದಲ್ಲಿದ್ದ ಮನುಷ್ಯರ ಬಳಿಗೆ ಹೋಗಿ. "ನನ್ನ ಸಂದೇಹ ಸ್ವಲ್ಪ ಪರಿಹರಿಸುವಿರಾ ? ಒಂದು ಕಡೆಯಲ್ಲಿ ಹೊಲಗದ್ದೆಗಳು ನೀರಿಲ್ಲದೆ ಒಣಗಿ ಒಡೆದುಕೊಂಡಿರುವಾಗ, ಇನ್ನೊಂದು ಕಡೆ ದೊಡ್ಡ ದೊಡ್ಡ ಮರಗಳಿಗೆ ನೀರು ಹರಿಯಿಸುತ್ತಿದ್ದಾರಲ್ಲಾ ? ಕೆರೆಯಲ್ಲಿ ಅಷ್ಟೊಂದು ನೀರಿರುವಾಗ. ಆ ಗದ್ದೆಗಳೆಲ್ಲ ಒಣಗಿ ಹೋಗಬೇಕೆಂದು ಎಂಥ ಶಾಪ ಹಿಡಿಯಿತು ? " ಎಂದು ಕೇಳಿದನು.

"ಆ ಒಣಕಲು ಗದ್ದೆಗಳು ನಮ್ಮವೇ. ಆ ಕೆರೆಯಲ್ಲಿರುವ ನೀರು ನಮ್ಮ ಗದ್ದೆಗಳಿಗೆ ಹೇಗೆ ಬಂದೀತು ಹೇಳಿ ? ಕೆರೆ ಜಮೀನುದಾರರದು. ಗದ್ದೆಗಳು ನಮ್ಮದು. ಆ ಮಾವು, ಹಲಸು ಮರಗಳ ತೋಟವೂ ಜಮೀನುದಾರರದು. ಮಳೆ ಬಂದರೆ ಹೊರತು ನಮ್ಮ ಹೊಲಗಳಿಗೆ ಗತಿಯಿಲ್ಲ. ಏನು ಮಾಡುವುದು ನಮ್ಮ ಗ್ರಹಚಾರಕ್ಕೆ ? " ಎಂದರು ರೈತರು.

ಈ ಸಮಾಚಾರ ತಿಳಿದು ಚಿನ್ನಪ್ಪನಿಗೆ ಬಹಳ ಕೋಪಬಂದಿತು. "ನೀವೆಲ್ಲಾ ಕೇವಲ ಮೂರ್ಖರೇನು ? ಕೆರೆ ಜಮೀನುದಾರರ ದಾದರೇನಾಯಿತು ? ಅದರಲ್ಲಿ ತುಂಬುವ ನೀರನ್ನು ಅವರ ತಾತ ಕಳುಹಿಸುತ್ತಾನಂತೇನು ? " ಎಂದು ಕೇಳಿದನು ಚಿನ್ನಪ್ಪ.

"ಜಮೀನುದಾರರ ತಾತ ಮಹಾನುಭಾವರಯ್ಯಾ. ಅವರು ಮಹಾದಾನಿಗಳು. ನಮ್ಮ ಹೊಲ ಗದ್ದೆಗಳು

ಬಿ. ಎನ್. ರಾವ್



ರನ್ನು ಕುರಿತು ಎಲ್ಲಾ ವಿವರಗಳನ್ನೂ ಸಂಗ್ರಹಿಸಿಕೊಂಡನು. ಜಮೀನುದಾರರ ಆ ಬಗೆಯ ಪ್ರವರ್ತನೆಗೆ ಪ್ರತ್ಯೇಕ ಕಾರಣವೇನಿರಲಿಲ್ಲ. ಅವರಿಗೆ ಇಂಗಿತ ಜ್ಞಾನ ಕಡಮೆ. ಬಡಜನರು ಲಾಭಗಳಿಸಿ ಶ್ರೀಮಂತರಾಗ ಕೂಡದೆಂಬ ಮೂರ್ಖ ಹಠ. ನಯದಿಂದಲೋ ಭಯದಿಂದಲೋ ಜಮೀನುದಾರರ ಮನಸ್ಸನ್ನು ಬದಲಾವಣೆಗೊಳಿಸಬೇಕೆಂದು ಚಿನ್ನಪ್ಪನು ಅಂದುಕೊಂಡನು.

ತನ್ನ ಕೆರೆಯ ನೀರನ್ನು ರೈತರು ಕಳ್ಳತನದಿಂದ ತಮ್ಮ ಹೊಲಗಳಿಗೆ ಬಿಡುತ್ತಾರೇನೋ ಎಂಬ ಅನುಮಾನದಿಂದ ಜಮೀನ್ದಾರರು ಪ್ರತಿ ದಿನವೂ ಕೆರೆಯ ದಂಡೆಯ ಮೇಲೆ ನಡೆಯುತ್ತ, ಹಸಿರಾಗಿರುವ ತಮ್ಮ ಹೊಲಗಳನ್ನು ನೋಡುತ್ತ, ಸಂತೋಷ ಪಡುತ್ತ ಹೋಗುವುದು ವಾಡಿಕೆ.

ಒಂದು ದಿನ ಜಮೀನುದಾರರು ಹಾಗೆ ನಡೆದುಕೊಂಡುಬರುವ ಸಮಯದಲ್ಲಿ ಚಿನ್ನಪ್ಪನು, ಕಾಷಾಯ ವಸ್ತ್ರ, ಗಡ್ಡ ಮೀಸೆಗಳಿಂದ ಎದೆಯಲ್ಲಿ ರುದ್ರಾಕ್ಷಿ ಮಾಲೆಯೊಂದಿಗೆ, ಕೆರೆಯಲ್ಲಿ ತೊಡೆಮಟ್ಟ ನೀರಲ್ಲಿ ನಿಂತುಕೊಂಡು ತಂಬಿಗೆಯಲ್ಲಿ ಕೆರೆಯ ನೀರನ್ನು ಮುಳುಗಿಸಿ ತೆಗೆದು ಪರೀಕ್ಷಿಸಿ, ಮತ್ತೆ ಕೆರೆಗೆ ಚೆಲ್ಲುತ್ತ ಮತ್ತೆ ಮತ್ತೆ ಅದೇ ಕೆಲಸ ಮಾಡುತ್ತಲಿದ್ದನು.

ಅವನು ಮಾಡುವ ಆ ಕೆಲಸವನ್ನು ನೋಡಿ ಜಮೀನುದಾರರಿಗೆ ಆಶ್ಚರ್ಯವಾಯಿತು. ಎಷ್ಟು ಹೊತ್ತಾದರೂ ಚಿನ್ನಪ್ಪ ಸನ್ಯಾಸಿ ಕೆರೆಯ ನೀರನ್ನು ತೆಗೆದು ಪರೀಕ್ಷಿಸಿ ಕೆರೆಗೇ ಚೆಲ್ಲುವ ತನ್ನ ಕೆಲಸವನ್ನು ನಿಲ್ಲಿಸದಿರುವುದನ್ನು ನೋಡಿ, ಜಮೀನುದಾರರು ಆವನ ಹತ್ತಿರ ಹೋಗಿ ಕುತೂಹಲದಿಂದ ತುಸು ಪರಿಹಾಸವನ್ನು ಬೆರೆಸಿ, "ಏನು ಕೆಲಸ ಇದು ಸನ್ಯಾಸೀ? ನೀರಿನಲ್ಲಿ ನಿಂತು ಇದೇನು ಆಟವೋ ತಪಸ್ಸೋ ಕ್ರಿಯೆಯೋ ಕರ್ಮವೋ! ನಿನ್ನದೇನಾದರೂ ವಸ್ತು ನೀರಿಗೆ ಬಿತ್ತೇನು?" ಎಂದು ಕೇಳಿದರು.

ನೆನೆದ ಮೇಲೆಯೇ ತಮ್ಮ ಹೊಲಗಳಿಗೆ ನೀರು ಹಾಯಿಸುವವರು. ಒಂದೊಂದು ಸಾರಿ ಪಾಪ, ತಮ್ಮ ಗದ್ದೆಗಳು ಒಣಗಿಹೋದರೂ ನೋಡುತ್ತಾ ಸುಮ್ಮನಿರುವರು. ಆ ರಾವುಬಹಾದ್ದೂರರ ಮಗ ರಾಜಾರಾಂಬಹಾದ್ದೂರರು ತಮ್ಮ ಹೊಲಗಳಿಗೆ ನೀರು ಹಾಯಿಸಿದ ಮೇಲೆ, ಉಳಿದ ನೀರನ್ನು ನಾವು ಹಾಯಿಸಿಕೊಳ್ಳಲು ಬಿಡುತ್ತಿದ್ದರು. ಆಮೇಲೆ ಈಗಿನವರಿದ್ದಾರಲ್ಲಾ, ಆ ರಾಜಾರಾಂರ ಮಗ. ನೀವೇ ನೋಡಿದಿರಲ್ಲ? ಒಂದು ಬೊಟ್ಟು ನೀರು ನಾವು ಮುಟ್ಟಬಾರದಂತೆ! ಏನು ಮಾಡುವುದು? ಬಡವರಾದ ನಾವು ಕೆರೆ ತೋಡಿಸಿ ಕೊಳ್ಳಲಿಕ್ಕೂ ಸಾಧ್ಯವಿಲ್ಲದಾಗಿದೆ. ನಮ್ಮಂಥವರ ಬದುಕು ಕಸಕ್ಕಿಂತ ಕಡೆಯಾಗಿದೆ" ಎಂದರು ರೈತರು.

ಈ ಮಾತುಗಳನ್ನು ಕೇಳುತ್ತಿದ್ದಂತೆ ಚಿನ್ನಪ್ಪನಿಗೆ ಇದಕ್ಕೇನಾದರೂ ಮಾಡಲೇಬೇಕೆಂಬ ಹಟ ಹುಟ್ಟಿತು. ಎರಡು ದಿನ ಆ ಊರಲ್ಲೇ ಇದ್ದು ಜಮೀನುದಾರ

ಚಿನ್ನಪ್ಪ ಸನ್ಯಾಸಿ ಕಿರುನಗುತ್ತ, "ಹೌದಯ್ಯಾ ಹೌದು. ಒಂದು ತಂಬಿಗೆ-ಒಂದೇ ಒಂದು ತಂಬಿಗೆ ಹೊಸ ನೀರಿಗಾಗಿ ಹುಡುಕುತ್ತಿದ್ದೇನೆ. ಆದರೆ ಈ ಕೆರೆಯಲ್ಲಿ ಬಹಳ ಭಾಗವೆಲ್ಲಾ ಹಳೆಯದೇ ನೀರು. ಆ ಲೋಕದಿಂದ ಕಷ್ಟಪಟ್ಟು ನಡೆದು ಬಂದ ನನ ಶ್ರಮವೆಲ್ಲಾ ವೃಥಾ ಆಗಿಹೋಯಿತು. ಏಕೆಂದರೆ ಆಕಾಶದಲ್ಲಿ ನೇತಾಡಿಕೊಂಡಿರುವ ಒಬ್ಬ ಪಾಪಿಯನ್ನು ಈ ಕೆರೆಯ ಹೊಸ ನೀರಿನಿಂದ ಸ್ವರ್ಗಕ್ಕೆ ಕಳುಹಿಸ ಬೇಕಾಗಿದೆ. ಅದೂ ಈ ಕೆರೆಯದೇ ಬೇಕೆಂದು ಕೂಗುತ್ತಿದ್ದಾನೆ ಪಾಪ! ಇದರಲ್ಲೆಲ್ಲಿದೆ ಹೊಸ ನೀರು?" ಎಂದು ಹೇಳಿ ಅಲ್ಲಿಂದ ಹೊರಟುಹೋಗು ವಂತೆ ನಟಿಸಿದನು.

ಜಮೀನುದಾರರ ಕುತೂಹಲವು ಏನೋ ಗಾಬರಿಗೆ ತಿರುಗಿತು. ಅವರು ಚಿನ್ನಪ್ಪ ಸನ್ಯಾಸಿಗೆ ಅಡ್ಡ ನಿಂತು, "ಅಯ್ಯಾ, ಆಕಾಶದಲ್ಲಿ ಪಾಪಿ ನೇತಾಡುವುದೆಂದ ರೇನು? ಹೊಸ ನೀರು ಅಂದರೇನು? ಆ ಲೋಕ ವೆಂದರೆ ಏನದು? ಆ ಪಾಪಿಗೂ ಈ ಕೆರೆಗೂ ಏನು ಸಂಬಂಧ? ದಯಮಾಡಿ ಎಲ್ಲವನ್ನೂ ಸ್ವಲ್ಪ ವಿಪುಲ ವಾಗಿ ಹೇಳಬೇಕು." ಎಂದರು ಕೈಮುಗಿದು.

ಅದಕ್ಕೆ ಚಿನ್ನಪ್ಪ ಸನ್ಯಾಸಿ, "ಅದರಲ್ಲೇನೂ ಮುಚ್ಚುಮರೆ ಇಲ್ಲವಯ್ಯ. ನಾನು ಪರಲೋಕವಾಸಿ ಯಾದವನು. ಈ ಕೆರೆಯ ಯಜಮಾನ ರಾಜಾರಾಂ ಬಹಾದ್ದೂರ್ ಅತ್ತ ಸ್ವರ್ಗಕ್ಕೂ ಅಲ್ಲ, ಇತ್ತ ನರಕಕ್ಕೂ ಇಲ್ಲದೆ ಆಕಾಶದಲ್ಲಿ ನೇತಾಡುತ್ತ ಒದ್ದಾಡಿ ಕೊಂಡಿದ್ದಾನೆ. ಸ್ವರ್ಗದಲ್ಲಿರುವ ಅವನ ತಂದೆ ರಾವು ಬಹಾದ್ದೂರರು ತನ್ನ ಮಗನ ದುಸ್ಥಿತಿಗೆ, ಚಿಂತಿಸುತ್ತ, ಈ ಕೆರೆಯಲ್ಲಿರುವ ಹೊಸ ನೀರು ಒಂದು ತಂಬಿಗೆ ತುಂಬ ತರುವಂತೆ ನನ್ನನ್ನು ಕಳುಹಿಸಿದ್ದಾರೆ. ಆ ಪಾಪಿಯ ಮೇಲೆ ಈ ನೀರನ್ನು ಚೆಲ್ಲಿಬಿಟ್ಟರೆ ಆತನು ಸ್ವರ್ಗಕ್ಕೆ ಬರಬಹುದೆಂದು ದೇವತೆಗಳ ಅನುಮತಿ ಯಾಗಿದೆ. ಆ ಕೆಲಸಕ್ಕೆ ನನ್ನನ್ನು ಕಳುಹಿಸಲಾಗಿದೆ.



ಭೂಮಿಗೆ ಬರಬೇಕಾದರೆ ನಾವು ಮನುಷ್ಯ ರೂಪ ತಾಳದೆ ಉಪಾಯವಿಲ್ಲ. ಆದರೆ ಈ ಕೆರೆಯ ಯಜ ಮಾನ ಈಗಿನ ಜಮೀನುದಾರ ಮಹಾ ಪಾಪಿಯಂತೆ ಕಾಣುತ್ತಾನಲ್ಲ! ಅತ್ತ ಕಡೆಯ ಹೊಲ ಗದ್ದೆಗಳು ಒಣಗಿ ಹೋಗುತ್ತಿದ್ದರೂ ಕಳೆದ ಬಾರಿ ಬಿದ್ದ ನೀರ ನ್ನೆಲ್ಲಾ ತುಂಬಿಸಿಟ್ಟುಕೊಂಡು ಚೆಂದ ನೋಡುತ್ತಿರುವ ಈ ಪಾಪಿಯ ಗತಿ ಇನ್ನೇನು ಹೀನ ಸ್ಥಿತಿಗೆ ಹೋಗುವುದೋ, ನನ್ನಂಥ ದೂತರಿಗೇನು ಗೊತ್ತು! ನಮ್ಮೊಡೆಯ ದೇವೇಂದ್ರನಿಗೇ ಗೊತ್ತು! ಮಳೆ ಸುರಿಸುವ ಮಹಾನುಭಾವ ಅವನು ತಾನೇ! ನಾನು ಕೇವಲ ಅವನು ಹೇಳುವ ಕೆಲಸ ಮಾಡುವವನು!" ಎಂದನು. ಜಮೀನುದಾರರು ಭಯದಿಂದ ನಡುಗುತ್ತ, "ಅಯ್ಯಾ! ಈ ಕೆರೆಯ ನೀರಿನಲ್ಲಿ ಅಷ್ಟೊಂದು ಮಹತ್ವವಿದೆಯೇನು?" ಎಂದು ಕೇಳಿದರು.

"ಇದರ ಮಹತ್ವ ಅಜ್ಞಾನಿಗಳಾದ ನಿಮಗೇನು ಗೊತ್ತಿದೆ? ಇದಕ್ಕೆ ಬೀಳುವ ನೀರಿನಲ್ಲಿ ಹಿಮಾಲಯ

ಪರ್ವತಗಳಿಂದ ಬರುವ ಗಂಗೆಯೇ ಮೊದಲಾದ ಪವಿತ್ರ ಜಲಗಳಿವೆ. ಆದುದರಿಂದಲೇ ಸತ್ತುಹೋದ ಇಬ್ಬರು ಜಮೀನುದಾರರ ಪಾಪ ಪುಣ್ಯಗಳು ಈ ನೀರನ್ನು ಹೊಂದಿಕೊಂಡಿವೆ. ರಾಮಬಹಾದ್ದೂರರ ಕಾಲದಲ್ಲಿ ಇದರ ನೀರು ಎಲ್ಲಾ ರೈತರ ಹೊಲ ಗದ್ದೆ ಗಳಿಗೂ ಹರಿದುಕೊಂಡು ಪುಣ್ಯಜಲವೆನಿಸಿತು. ಅವರು ಮೊದಲು ಇತರರ ಹೊಲಗಳಿಗೆ ನೀರುಣಿಸಿ ಆ ಮೇಲೆ ಉಳಿದಿದ್ದರೆ ತಮ್ಮ ಹೊಲಗಳಿಗೆ ಹರಿಸುತ್ತಿದ್ದರು. ತನ್ನ ಗದ್ದೆಗಳು ಒಣಗಿಹೋದರೂ, ಇತರರ ಪೈರು ಚೆನ್ನಾಗಿದ್ದರೆ ಸಂತೋಷ ಪಡುವ ಗುಣ ಅವರದು. ಬದುಕಿದಷ್ಟು ಕಾಲ ಧರ್ಮದಾತರೆಂದು ಖ್ಯಾತರಾಗಿ ಸತ್ತು ನೇರಾಗಿ ಸ್ವರ್ಗ ಸೇರಿದರು. ಅವರ ಮಗ ರಾಜಾರಾಂ ಬಹಾದ್ದೂರ್ ಸ್ವಾರ್ಥಪರರು. ತನ್ನ ಹೊಟ್ಟೆ ತುಂಬಿದ ಮೇಲೆಯೇ ಇತರರಿಗೆ ಇದ್ದು ದನ್ನು ಬಡಿಸುವ ಗುಣದವರು. ಆ ಕಾರಣದಿಂದಲೇ ಅವರು ಅತ್ತ ಸ್ವರ್ಗಕ್ಕೂ ಇಲ್ಲ ಇತ್ತ ನರಕಕ್ಕೂ ಇಲ್ಲ ಎಂಬ ಸ್ಥಿತಿಯಲ್ಲಿದ್ದಾರೆ. ಈ ಲೆಕ್ಕದಲ್ಲಿ ರಾಮ ಬಹಾದ್ದೂರರು ಉತ್ತಮರು. ರಾಜಾರಾಂ ಬಹಾದ್ದೂರರು ಮಧ್ಯಮರು. ಈಗ ಇರುವವರು ಅಧಮರೇ ಸರಿ. ಕಣ್ಣಿಗೇ ಕಾಣುತ್ತಿದೆಯಲ್ಲ! ಇವರ ಗತಿ ಸೀದಾ ನರಕವೇ ಆಗಿರಬಹುದು." ಎಂದನು ಚೆನ್ನಪ್ಪ ಸನ್ಯಾಸಿ. ಕೂಡಲೇ ಜಮೀನುದಾರರು ಚೆನ್ನಪ್ಪ ಸನ್ಯಾಸಿಯ ಕಾಲಿಗೆ ಬಿದ್ದು, "ಆ ಅಧಮನು ನಾನೇ ಸ್ವಾಮೀ. ನಾನು ಸ್ವರ್ಗಕ್ಕೆ ಹೋಗುವ ಮಾರ್ಗವೇನೆಂಬುದನ್ನು ದಯವಿಟ್ಟು ಹೇಳಿ ಉದ್ಧಾರ ಮಾಡಬೇಕು" ಎಂದು ಕೇಳಿಕೊಂಡರು.

ಚೆನ್ನಪ್ಪನು ಬಾಗಿ ಜಮೀನುದಾರರನ್ನು ಎಬ್ಬಿಸಿ, "ಹೆದರಬೇಡಿ! ಪಾಪ ಭೀತಿ ಇದ್ದರೆ ಪುಣ್ಯ ತನ್ನಂತೆ ಬರುತ್ತದೆ. ನಿಮಗಿನ್ನೂ ಬೇಕಾದಷ್ಟು ಆಯುಷ್ಯ ಇದೆ. ನಾನು ಹೇಳಿದ ಹಾಗೆ ಮಾಡಿದರೆ ನೀವು ಮಾತ್ರವಲ್ಲ, ನಿಮ್ಮ ತಂದೆ ಕೂಡಾ ಸ್ವರ್ಗಕ್ಕೆ ಹೋಗ ಬಹುದು. ಈಗ ನೋಡಿದಿರಾ, ನಿಮ್ಮ ತಾತ ಮಾಡಿದ ಪುಣ್ಯ ನಿಮ್ಮ ತಂದೆಯನ್ನು ಸ್ವರ್ಗಕ್ಕೆ ಎಳೆಯುತ್ತಿದ್ದರೆ, ನೀವು ಮಾಡಿದ ಪಾಪ ಅವರನ್ನು ನರಕಕ್ಕೆ ಎಳೆಯುತ್ತಿದೆ. ಈಗ ನೀವು ಪುಣ್ಯಕಾರ್ಯ ಗಳನ್ನು ತುಂಬಾ ಮಾಡಿದ ಹೊರತು ನಿಮ್ಮ ತಂದೆಗೂ ವಿಮೋಚನವಿಲ್ಲ. ಆಗಿ ಹೋದುದನ್ನು ಮರೆತು ಬಿಡಿರಿ. ಮೊದಲನೆಯ ಕಾರ್ಯವಾಗಿ ಕೆರೆಯ ನೀರನ್ನು ಬೇರೆ ರೈತರ ಹೊಲಗಳಿಗೆ ಬಿಡಿರಿ. ನಿಮ್ಮಿಂದ ಸಾಧ್ಯವಾದಷ್ಟು ಮಟ್ಟಿಗೆ ಎಲ್ಲರ ಬೆಳೆಗಳೂ ಒಳ್ಳೆಯದಾಗುವಂತೆ ಮಾಡಿರಿ." ಎಂದನು.

ಆಮೇಲೆ ಆ ಜಮೀನುದಾರರು ಧರ್ಮಾತ್ಮರೆಂದು ಹೆಸರು ಪಡೆದರು. ಅವರ ಕೆರೆಯಲ್ಲಿ ಪ್ರತಿವರ್ಷವೂ ಹೊಸ ನೀರೇ ಇರುತ್ತಿತ್ತು.





# ಸೇರಿಗೆ ಸವಾಸೇರು

ಗಾಣಾವರ ಎಂಬ ಊರಿನಲ್ಲಿ ಗೌರಿರಾಜನೆಂಬ ಗೃಹಸ್ಥನಿದ್ದನು. ಅವನಿಗೆ ಇಬ್ಬರು ಸ್ನೇಹಿತರಿದ್ದರು. ಒಬ್ಬನ ಹೆಸರು ವೆಂಕಟೇಶನೆಂದು, ಇನ್ನೊಬ್ಬನು ಶೋಭನಾದ್ರಿ ಎಂಬವನು.

ಗೌರಿರಾಜನು ಧನವಂತನಾಗಿರುವುದರಿಂದಲೇ ವೆಂಕಟೇಶನೂ ಶೋಭನಾದ್ರಿಯೂ ಅವನೊಡನೆ ತುಂಬ ಸ್ನೇಹವಾಗಿ ವರ್ತಿಸುತ್ತಿದ್ದರು. ಅವರಿಬ್ಬರೂ ಹಿತಚಿಂತಕರಂತೆ ಗೌರಿರಾಜನಿಗೆ ಆಗಾಗ ಏನಾದರೂ ಸಲಹೆ ಹೇಳುತ್ತಿದ್ದರು. ಒಂದು ಸಾರಿ, "ನಿಮ್ಮ ಹಣವನ್ನು ಸುಮ್ಮನೆ ಪೆಟ್ಟಿಗೆಯೊಳಗೇ ಇಟ್ಟು ಕೊಂಡಿದ್ದರೆ ಏನು ಲಾಭವಿದೆ ಹೇಳಿ? ಅದನ್ನು ಮೂಲಧನವಾಗಿ ಮಾಡಿ ವ್ಯಾಪಾರ ಮಾಡುತ್ತಾ ಇದ್ದರೆ ರೂಪಾಯಿಗೆ ಹತ್ತು ರೂಪಾಯಿ ಲೆಕ್ಕದಲ್ಲಿ ಲಾಭವಾಗುತ್ತಾ ಇರುತ್ತೆ" ಎಂದರು.

"ನನಗೆ ವ್ಯಾಪಾರ ಮಾಡಲಿಕ್ಕೆ ಸಾಧ್ಯವಾಗದು. ಅದರ ಅನುಭವವೂ ನನಗಿಲ್ಲ." ಎಂದನು ಗೌರಿರಾಜ.

"ನೀವು ಮೂಲಧನ ಮಾತ್ರ ಹಾಕಿರಿ. ವ್ಯಾಪಾರವೆಲ್ಲಾ ನಾವು ಮಾಡಿಬಿಡುತ್ತೇವೆ" ಎಂದರು ವೆಂಕಟೇಶನೂ ಶೋಭನಾದ್ರಿಯೂ.

ಅದರಂತೆ ಗೌರಿರಾಜನ ಧನದ ಆಧಾರದಲ್ಲಿ ವ್ಯಾಪಾರವು ಪ್ರಾರಂಭವಾಯಿತು. ಆ ಇಬ್ಬರು ಸ್ನೇಹಿತರನ್ನೂ ನಂಬಿ ಗೌರಿರಾಜನು ಎಲ್ಲವನ್ನೂ ಅವರ ಮೇಲೆಯೇ ಬಿಟ್ಟುಬಿಟ್ಟನು. ಅವರು ಸುಳ್ಳು ಲೆಕ್ಕ ತೋರಿಸಿ, ಅಸಲನ್ನೂ ಲಾಭವನ್ನೂ ಅಪಹರಿಸಿ ಗೌರಿರಾಜನನ್ನು ದಿವಾಳಿ ಮಾಡಿಬಿಟ್ಟರು.

ಅವರು ತನ್ನ ಧನವನ್ನೆಲ್ಲಾ ಅಪಹರಿಸಿ ತಲಾ ಐದೈದು ಸಾವಿರ ರೂಪಾಯಿಯನ್ನು ಗಂಟು ಕಟ್ಟಿ ಕೊಂಡಿದ್ದಾರೆಂದು ಕಟ್ಟಕಡೆಗಷ್ಟೇ ಗೌರಿರಾಜನಿಗೆ ಗೊತ್ತಾಯಿತು. ತಿಳಿದರೂ ಅವನು ಬಾಯಿಬಿಟ್ಟು ಅವರೊಂದಿಗೆ ಕೇಳಲಿಲ್ಲ. ಎಂದಿನಂತೆ ಅವರನ್ನು ಸ್ನೇಹಭಾವದಿಂದಲೇ ನೋಡಿಕೊಂಡಿದ್ದನು.

ಕೆಲವು ಕಾಲದ ಮೇಲೆ ಗೌರಿರಾಜನಿಗೆ ಏನೋ ರೋಗ ಬಂದು ಹಾಸಿಗೆ ಹಿಡಿದನು. ಇನ್ನು ತಾನು ಬಹಳ ಕಾಲ ಬದುಕಲಾರೆನೆಂದು ಅವನಿಗೆ ತೋರಿತು. ಮುಂದಿನ ವ್ಯವಸ್ಥೆ ಮೊದಲೇ ಮಾಡಬೇಕೆಂದು ಭಾವಿಸಿದನು. ಅವನು ಶೋಭನಾದ್ರಿಯನ್ನು ತನ್ನ ಬಳಿಗೆ ಬರಬೇಕೆಂದು ಸುದ್ದಿ ಕಳುಹಿಸಿದನು. ಅವನು ಬಂದ ಕೂಡಲೇ ಗೌರಿರಾಜನು ಅವನ ಕೈ ಹಿಡಿದು

೨೫ ವರ್ಷಗಳ ಹಿಂದಿನ ಚಂದಮಾಮ ಕಥೆ



"ಶೋಭನಾದ್ರಿ, ನನಗೆ ನೀನು ಒಂದು ಉಪಕಾರ ಮಾಡಬೇಕು." ಎಂದನು. "ಏನು ಮಾಡಬೇಕು, ಹೇಳಿ" ಎಂದ ಶೋಭನಾದ್ರಿ.

"ನಾನಿನ್ನು ಹೆಚ್ಚು ದಿನ ಬದುಕಲಾರೆ. ನಾನು ಸಾಯುವ ಮೊದಲು ನನ್ನ ಸೊತ್ತು ಯಾವು ಯಾವುದು ಎಲ್ಲೆಲ್ಲಿದೆ ಎಂಬುದನ್ನು ನನ್ನ ಹೆಂಡತಿಗೆ ಹೇಳಬೇಕಾದ ಕಾಲ ಬಂದಿದೆ. ಆದರೆ ನನ್ನವಳು ತುಂಬಾ ದುಂದುವೆಚ್ಚದ ಗುಣದವಳು. ಒಮ್ಮೆಗೇ ಹಣ ಕೈಗೆ ಬಂದುಬಿಟ್ಟರೆ ಮೂರೇ ನಿಮಿಷದಲ್ಲಿ ಖರ್ಚು ಮಾಡಿಬಿಡುತ್ತಾಳೆ" ಎಂದ ಗೌರಿರಾಜ.

ಅವನ ಹತ್ತಿರ ಇನ್ನೂ ಧನವಿರುವ ಸಂಗತಿ ಗೊತ್ತಾದ ಕೂಡಲೇ ಶೋಭನಾದ್ರಿಯ ಬಾಯಿಯಲ್ಲಿ ನೀರೂರಿತು. 'ಅರೆ! ಇಷ್ಟು ದಿನ ಬಾಯಿಬಿಡ ಲಿಲ್ಲ ಮನುಷ್ಯ! ಎಲ್ಲಾ ಕಳೆದುಕೊಂಡವನ ಹಾಗೇ ತೋರಿಸಿದ!' ಎಂದುಕೊಂಡು, "ನಿಜವೇ ನಿಮ್ಮ ಮಾತು. ಹೆಣ್ಣಿನ ಕೈಯಲ್ಲಿ ಹಣವೂ ಗಂಡಿನ ಕೈಯಲ್ಲಿ ಮಗುವೂ ಮಣ್ಣೇ ಆಗುತ್ತೆ ಎಂಬ ಸಾಮತಿ ಸುಮ್ಮನೆ ಹುಟ್ಟಿಲ್ಲ" ಎಂದನು.

"ಈಗ ನಿಜ ಹೇಳುತ್ತೇನೆ. ವ್ಯಾಪಾರದಲ್ಲಿ ಹಾಕಿದ್ದು ನಷ್ಟವಾಗಿ ಹೋದರೂ ನನ್ನ ಹತ್ತಿರ ಹದಿನಾರು ಸಾವಿರ ರೂಪಾಯಿ ಉಳಿದಿದೆ. ಆ ರೂಪಾಯಿಗಳನ್ನು ಸಾವಿರ, ಸಾವಿರದ ಲೆಕ್ಕದಲ್ಲಿ ಹದಿನಾರು ಮಡಿಕೆಗಳಲ್ಲಿ ಹಾಕಿ ನನ್ನ ಮನೆಯ ನಾಲ್ಕು ಕೋಣೆಗಳಲ್ಲಿ, ಒಂದೊಂದು ಮಡಿಕೆ ಯನ್ನು ಒಂದೊಂದು ಮೂಲೆಯಲ್ಲಿ ಹುಗಿದಿಟ್ಟಿದ್ದೇನೆ. ಹದಿನಾರು ಮಡಿಕೆಗಳಿವೆಯೆಂದು ನನ್ನ ಹೆಂಡತಿಗೆ ಒಂದೇ ಸಾರಿ ತಿಳಿಯಲೇ ಕೂಡದು. ನೀನು ಮಾಡ ಬೇಕಾದ ಉಪಕಾರವೇನಂದರೆ..." ಎಂದು ಗೌರಿ ರಾಜನು ಯೋಚಿಸುವವನಂತೆ ಸುಮ್ಮನಾದನು.

"ಹೇಳಿ, ಹೇಳಿ. ನಿಮ್ಮ ಮಾತು ನಡೆಸದೆ, ಮತ್ಯಾರ ಮಾತು ನಡೆಸಲಿ?" ಎಂದ ಶೋಭನಾದ್ರಿ.

"ಆಗಾಗ ನೀನು ಬಂದು ಇವಳ ಪರಿಸ್ಥಿತಿ ನೋಡಿ ಕೊಳ್ಳುತ್ತಾ ಇರು. ನನ್ನ ಹೆಂಡತಿ ಹಣವಿಲ್ಲದೆ ಕಷ್ಟ ಪಡುತ್ತಾಳೆಂದು ಗೊತ್ತಾದಾಗ, ಒಂದು ಮಡಿಕೆಯ ಮಾತು ಹೇಳಿ, ಅದನ್ನು ಅಗೆದುಕೊಳ್ಳಲು ಹೇಳು. ಅದು ಮುಗಿಯುವವರೆಗೂ ಉಳಿದ ಮಡಿಕೆಗಳ ವಿಷಯ ಹೇಳಿಬಿಡಬೇಡ" ಎಂದ ಗೌರಿರಾಜ.

"ಸರಿ ಸರಿ. ಅರ್ಥವಾಯಿತು" ಎಂದ ಶೋಭ ನಾದ್ರಿ. "ಈ ಮಡಿಕೆಗಳ ರಹಸ್ಯವನ್ನು ನೀನು ಬೇರೆ ಯಾರಿಗೂ ಹೇಳಬಾರದು. ವೆಂಕಟೇಶನಿಗೂ ಹೇಳಬೇಡ. ಅವನ ಮೇಲೆ ನನಗೆ ಅಷ್ಟು ನಂಬುಗೆ ಕಾಣುವುದಿಲ್ಲ, ಅದಕ್ಕೇ ನಿನ್ನನ್ನು ಕರೆಯಿಸಿ ನೀನೇ ಈ ಉಪಕಾರ ಮಾಡಬೇಕೆಂದು ಪ್ರಾರ್ಥಿಸುತ್ತೇನೆ." ಎಂದನು ಗೌರಿರಾಜ.

"ಹಾಗೇ ಆಗಲಿ. ನೀವು ಹೇಳಿದ ಹಾಗೆಯೇ ಮಾಡುತ್ತೇನೆ. ನನ್ನನ್ನು ನಂಬಿ ನೀವು ನಿಶ್ಚಿಂತೆ ಯಾಗಿರಬಹುದು. ಇಷ್ಟು ಸಣ್ಣ ವಿಷಯಕ್ಕೆ ಇಷ್ಟೆಲ್ಲಾ

ಹೇಳಬೇಕೇ ? ಚಿಂತಿಸಬೇಡಿ !" ಎಂದು ನಂಬುಗೆ ಹೇಳಿ ಶೋಭನಾದ್ರಿ ಹೊರಟುಹೋದನು.

ಅದೇದಿನ ಸಾಯಂಕಾಲ ಗೌರಿರಾಜನು ಜರಡನೇ ಸ್ನೇಹಿತನಾದ ವೆಂಕಟೇಶನನ್ನು ತನ್ನ ಬಳಿಗೆ ಕರೆಯಿಸಿ, ಆ ಮಡಿಕೆಗಳ ರಹಸ್ಯವನ್ನು ಅವನೊಂದಿಗೆ ಕೂಡಾ ಹೇಳಿ, ಶೋಭನಾದ್ರಿಯೊಂದಿಗೆ ಹೇಳಿದ ಹಾಗೆಯೇ, "ಈ ಉಪಕಾರ ನನಗೆ ನೀನೇ ಮಾಡಬೇಕು. ಈ ರಹಸ್ಯವನ್ನು ನೀನು ಶೋಭನಾದ್ರಿಯೊಂದಿಗೂ ಹೇಳ ಬಾರದು. ಅವನ ಮೇಲೆ ನನಗೆ ನಂಬುಗೆ ಇಲ್ಲ ದ್ದರಿಂದಲೇ ನಿನ್ನನ್ನು ಗಟ್ಟಾಗಿ ಕರೆಯಿಸಿ ಹೇಳು ತ್ತೇನೆ." ಎಂದನು.

"ಅವನಿಗೇಕೆ ಹೇಳುತ್ತೇನೆ?...ಇನ್ನು ನೀವು ಚಿಂತೆ ಬಿಟ್ಟು ನೆಮ್ಮದಿಯಾಗಿರಿ. ಆ ವ್ಯವಹಾರ ನಾನೇ ನೋಡಿ ಕೊಳ್ಳುತ್ತೇನೆ." ಎಂದು ನಂಬುಗೆ ಹೇಳಿದ ವೆಂಕಟೇಶ.

ಅನಂತರ ಗೌರಿರಾಜನು ಹೆಚ್ಚು ದಿನ ಬದುಕಲಿಲ್ಲ. ಮುಂದೆ ಕೆಲವು ತಿಂಗಳ ಮೇಲೆ ಗೌರಿರಾಜನ ಹೆಂಡತಿ ಕಾವೇರಮ್ಮ ಶೋಭನಾದ್ರಿಯೊಂದಿಗೆ, "ಮನೆ ಖರ್ಚಿಗೆ ಹಣವಿಲ್ಲದೆ ಬಹಳ ಕಷ್ಟವಾಗಿದೆ. ಒಂದು ಇಪ್ಪತ್ತೈದು ರೂಪಾಯಿಯಾದರೂ ಅಗತ್ಯವಾಗಿ ಬೇಕಿತ್ತು, ಯಾರಾದರೂ ಕೈಗಡಕೊಟ್ಟರೆ ಒಳ್ಳೇದಿತ್ತು" ಎಂದಳು.

"ನನ್ನ ಹತ್ತಿರ ಇರುತ್ತಿದ್ದರೆ ಕೊಡುತ್ತಿದ್ದೆ. ಅಲ್ಲಮ್ಮಾ, ನೀವು ಮಾತ್ರ ಹೀಗೆ ಸಾಲಸೋಲ ಮಾಡಿಕೊಂಡು ಎಷ್ಟುದಿನ ದೂಡಬಲ್ಲಿರಿ ? ಈ ಮನೆ ಯನ್ನು ಮಾರಿಬಿಟ್ಟರೆ ಸಾವಿರ ರೂಪಾಯಿ ಖಂಡಿತಾ ಬಂದೀತು. ಹಾಗೆ ಮಾಡಿಬಿಡಬಾರದೇ ?" ಎಂದ ಶೋಭನಾದ್ರಿ.

"ನನಗೆ ಈ ಆಲೋಚನೆ ಹೊಳೀಲೇ ಇಲ್ಲ. ಯಾವುದಕ್ಕೂ ರಾತ್ರಿ ಆಲೋಚಿಸಿ ನಾಳೆ ಹೇಳುತ್ತೇನೆ" ಎಂದಳು ಕಾವೇರಮ್ಮ.



ಈ ಸಂಗತಿ ಹೀಗಿರುವಾಗ ಅದೇದಿನ ಸಾಯಂಕಾಲ ಸಾವಿತ್ರಮ್ಮನ ಮನೆಗೆ ವೆಂಕಟೇಶನು ಬಂದನು. "ಖರ್ಚು ಮಾಡಲು ಹಣವಿಲ್ಲದೆ ಕಷ್ಟವಾಗಿದೆ. ಶೋಭನಾದ್ರಿ ಈ ಮನೆಯನ್ನು ಮಾರಿದರೆ ಸಾವಿರ ರೂಪಾಯಿ ಬಂದೀತು ಅನ್ನುತ್ತಾನೆ. ಮಾರಲಾ ಅಂತ ಆಲೋಚಿಸುತ್ತಿದ್ದೇನೆ" ಎಂದಳು ಸಾವಿತ್ರಿ.

ಅದಕ್ಕೆ ವೆಂಕಟೇಶ, "ಬರೀ ಸಾವಿರವೆಂದರೇನು ? ನೀವು ನಿಜವಾಗಿ ಮಾರುವಿರಾದರೆ ಹದಿನೈದು ನೂರು ನಾನೇ ಕೊಡುತ್ತೇನೆ" ಎಂದನು.

ಮರುದಿನ ಬೆಳಿಗ್ಗೆ ಶೋಭನಾದ್ರಿ ಬಂದನು. ಸಾವಿತ್ರಿ ಅವನೊಂದಿಗೆ, ವೆಂಕಟೇಶ ಹೇಳಿದ ಸಂಗತಿ ಯನ್ನು ಹೇಳಿದಳು. "ನೀವು ಮಾರುವ ನಿಶ್ಚಯ ಮಾಡಿದರೆ ನಾನು ಎರಡು ಸಾವಿರ ಕೊಡುತ್ತೇನೆ" ಎಂದ ಶೋಭನಾದ್ರಿ.

ಹದಿನಾರು ಸಾವಿರ ರೂಪಾಯಿಗಳಿರುವ ಮಡಿಕೆ ಗಳಿರುವ ಮನೆಗೆ ಎರಡು ಸಾವಿರ ರೂಪಾಯಿ ಯಾವ

ಮೂಲೆಯ ನಷ್ಟ? ಎಂದುಕೊಂಡನು ಶೋಭನಾದ್ರಿ. ಆದಿನ ಸಾಯಂಕಾಲ ಎಂದಿನಂತೆ ಬಂದ ವೆಂಕಟೇಶನು ಎರಡು ಸಾವಿರದ ಐನೂರು ರೂಪಾಯಿ ತಾನು ಕೊಡುವೆನೆಂದು ಹೇಳಿದನು. ಈ ವಿಧವಾಗಿ ದಿನದಿಂದ ದಿನಕ್ಕೆ ಅವರಿಬ್ಬರ ನಡುವೆ ಮೇಲಾಟ ಬಿತ್ತು. ಮನೆಯ ಬೆಲೆ ಹೆಚ್ಚಿತು. ಕಡೆಗೆ ಶೋಭನಾದ್ರಿ ಹತ್ತು ಸಾವಿರ ಕೊಡುತ್ತೇನೆಂದನು. ಹದಿನಾರು ಸಾವಿರದಲ್ಲಿ ಹತ್ತು ಸಾವಿರಹೋದರೆ ಇನ್ನೂ ಆರು ಸಾವಿರವಿದೆಯಷ್ಟೆ?

ಕಾವೇರಮ್ಮ ಅಷ್ಟೇನೂ ಮೂಢಳಾಗಿರಲಿಲ್ಲ. ವೆಂಕಟೇಶನು ಇನ್ನೂ ಬೆಲೆ ಏರಿಸುವನೇನೋ ಎಂದು ನೋಡಿದಳು.

ಆದರೆ ವೆಂಕಟೇಶನು ಸ್ಪರ್ಧೆಗೆ ಬರಲಿಲ್ಲ. ಅವನು ಶೋಭನಾದ್ರಿಯನ್ನು ಸಂಧಿಸಿ, "ಏನೋ ಇದು? ಆ ಮನೆಗೆ ಹತ್ತು ಸಾವಿರ ಕೊಡುವುದಾಗಿ ಹೇಳಿದೆಯಂತೆ. ಏನು ಬಾಚಿಕೊಳ್ಳೋಣವೆಂದು ನೋಡುವಿ?" ಎಂದು ಕೇಳಿದನು.

"ನೀನೇನು ಬಾಚಿಕೊಳ್ಳುವಾ ಅಂತ ನೋಡುವಿ?" ಎಂದು ತಿರುಗಿ ಕೇಳಿದ ಶೋಭನಾದ್ರಿ. ವೆಂಕಟೇಶ ಏನೂ ಹೇಳದೆ ಮುಗುಳು ನಕ್ಕನು. ಶೋಭನಾದ್ರಿಯೂ ಪ್ರತಿ ಮುಗುಳು ನಗು ಬೀರಿದ. ಅಸಲು ರಹಸ್ಯ ಇವನಿಗೆ ಹೇಗೋ ತಿಳಿದುಹೋಯಿತೆಂದು ಇವನೂ, ಇವನಿಗೆ ಹೇಗೋ ತಿಳಿದು ಹೋಯಿತೆಂದು ಅವನೂ ಅರ್ಥಮಾಡಿಕೊಂಡರು. ಹೀಗೆ ಮೇಲಾಟ ನಡೆದುದರಿಂದಲೇ ತಿಳಿದುಹೋಯಿತೆಂದುಕೊಂಡರೇ ಹೊರತು, ಬೇರೆ ವಿಧವಾಗಿ ಯೋಚನೆ ಬರಲಿಲ್ಲ

"ನಿನ್ನ ಗಂಟು ಐದು ಸಾವಿರ ತಾನೆ? ಹತ್ತು ಸಾವಿರ ಎಲ್ಲಿಂದ ತರುತ್ತಿ? ಎಂದು ವೆಂಕಟೇಶನು ಕೇಳಿದನು.

"ನಿನ್ನ ಗಂಟೂ ಅಷ್ಟೇ ತಾನೆ? ಅದನ್ನೇ ನನಗೆ ಸಾಲಕೊಟ್ಟುಬಿಡು. ಒಂದು ವಾರದೊಳಗೆ ತೀರಿಸಿ ಬಿಡುತ್ತೇನೆ." ಎಂದನು ಶೋಭನಾದ್ರಿ.

"ಅದೆಲ್ಲಾ ಸಾಧ್ಯವಿಲ್ಲ. ಆ ಮನೆಯನ್ನು ನಮ್ಮಿಬ್ಬರ ಹೆಸರಿನಲ್ಲಿಯೂ ಬರೆಯಿಸಿಕೊಂಡು ಬಿಡೋಣ." ಎಂದನು ವೆಂಕಟೇಶ. ಇದಕ್ಕೆ ಶೋಭನಾದ್ರಿ ಒಪ್ಪಿದ.

ಆಮೇಲೆ ಅವರಿಬ್ಬರೂ ಗೌರಿರಾಜನಿಗೆ ಮೋಸ ಕೊಟ್ಟು ಅಪಹರಿಸಿದ ಆ ಹತ್ತು ಸಾವಿರವನ್ನೂ ತಂದು ಕಾವೇರಮ್ಮನಿಗೆ ಕೊಟ್ಟು, ಮನೆಯನ್ನು ತಮ್ಮ ಹೆಸರಿಗೆ ಮಾಡಿಕೊಂಡರು,

ಅದೆಲ್ಲಾ ಆಗಿ ಕಾವೇರಮ್ಮ ಎಲ್ಲಿಗೋ ಹೊರಟು ಹೋದ ಮೇಲೆ, ವೆಂಕಟೇಶ ಶೋಭನಾದ್ರಿಯರು ಗುದ್ದಲಿ ತೆಗೆದುಕೊಂಡು, ಮನೆಯ ಕೋಣೆಗಳ ಮೂಲೆಗಳನ್ನು ಅಗೆಯಲು ತೊಡಗಿದರು, ಎಷ್ಟು ಅಗೆದರೂ ಒಂದು ಮಡಿಕೆ ಕೂಡಾ ಹೊರಡಲಿಲ್ಲ!





# ಚ್ಯವನ

ಭೃಗು ಮಹರ್ಷಿಗೆ ಪುಲೋಮಳಲ್ಲಿ ಹುಟ್ಟಿದ ಮಗನಿಗೆ ಚ್ಯವನನೆಂದು ಹೆಸರು. ಇವನು ತಪಸ್ಸಿನಲ್ಲೇ ಕುಳಿತಿದ್ದು, ಹಾಗೆಯೇ ಮುದುಕನಾದನು. ಅವನನ್ನು ಹುತ್ತವು ಬೆಳೆದು ಮುಚ್ಚಿಹಾಕಿತು.

ಹಾಗಿರುವಾಗ ಶರ್ಯಾತಿ ಎಂಬ ರಾಜನು ವನ ವಿಹಾರ ಮಾಡುತ್ತಾ ಬಂದನು. ಅವನು ವೈವಸ್ವತ ಮನುವಿನ ಮಗ. ಅವನು ತನ್ನ ಕುಮಾರಿ ಸುಕನ್ಯೆಯನ್ನೂ ಇತರ ಪರಿವಾರವನ್ನೂ ಕೂಡಿಕೊಂಡು ಬಂದಿದ್ದನು. ಸುಕನ್ಯೆ ಹುತ್ತದೊಳಗಿನಿಂದ ಕಾಂತಿಕಿರಣಗಳು ಹೊರಡುವುದನ್ನು ನೋಡಿ ಕೌತುಕಗೊಂಡು, ರಾಜಭಟರಿಂದ ಆ ಹುತ್ತವನ್ನು ಒಡೆಸಿದಳು.

ಆದರಿಂದ ಚ್ಯವನನಿಗೆ ತಪೋಭಂಗವಾಗಿ ಅಲ್ಲಿದ್ದ ಸುಕನ್ಯೆಗೆ ಮಾತ್ರವಲ್ಲದೆ ಅವಳ ತಂದೆ ಮತ್ತು ಪರಿವಾರದವರಿಗೆ ಕೂಡಾ ಶಾಪ ಕೊಟ್ಟುಬಿಟ್ಟನು, ಶರ್ಯಾತಿ ಹೆದರಿ ಕೈ ಮುಗಿದು, ಮುಗ್ಧಳಾದ ತನ್ನ ಮಗಳು ಅಜ್ಞಾನದಿಂದ ಮಾಡಿದ ಅಪರಾಧವನ್ನು ಕ್ಷಮಿಸಿ ರಕ್ಷಿಸಬೇಕೆಂದು ಬೇಡಿಕೊಂಡನು. ಅವಳನ್ನು ತನಗೆ ಕೊಟ್ಟು ಮದುವೆ ಮಾಡಿದರೆ ಶಾಪವನ್ನು ಉಪಸಂಹರಿಸುವೆನೆಂದನು ಚ್ಯವನ. ಶರ್ಯಾತಿ ಹಾಗೆಯೇ ಮಾಡಿ, ಶಾಪದಿಂದ ಪಾರಾದನು. ಹೀಗೆ ಚ್ಯವನನು ಮಹಾ ಕೋಪಿಷ್ಠನಾಗಿದ್ದರೂ ಸುಕನ್ಯೆ ಅವನಿಗೆ ಶ್ರದ್ಧೆಯಿಂದ ಸೇವೆಗಳನ್ನು ಮಾಡಿ, ಅವನ ಮೆಚ್ಚುಗೆಯನ್ನು ಸಂಪಾದಿಸಿಕೊಂಡಳು.

ಹೀಗಿರಲು ಒಂದು ದಿನ ಅಶ್ವಿನೀದೇವತೆಗಳು ಚ್ಯವನ ಮಹರ್ಷಿಯ ಆಶ್ರಮದ ಮೇಲಿಂದಾಗಿ ಹೋಗುತ್ತ, ಸುಕನ್ಯೆಯನ್ನು ನೋಡಿ, "ಏನಮ್ಮ ? ಇಷ್ಟೊಂದು ತಾರುಣ್ಯದಲ್ಲಿರುವ ನೀನು ಈ ಮುದುಕ ಗಂಡನೊಂದಿಗೆ ಹೇಗೆ ಸಂಸಾರ ಸಾಗಿಸುವಿಯೋ ? ನಮ್ಮೊಂದಿಗೆ ಬಂದರೆ ನಿನಗೆ ತಕ್ಕವನಾದ ಯುವಕ ಗಂಡನನ್ನು ತೋರಿಸುತ್ತೇವೆ" ಎಂದರು.

ಸುಕನ್ಯೆ ಅವರಿಗೇನೂ ಹೇಳದೆ, ಅವರು ಹೇಳಿದ ಮಾತುಗಳನ್ನು ಚ್ಯವನನೊಂದಿಗೆ ಹೇಳಿದಳು. ಚ್ಯವನನು ಕೋಪಿಸದೆ, "ಅವರು ಹೇಳಿದಂತೆಯೇ ಮಾಡು" ಎಂದು ಹೇಳಿ, ಅಶ್ವಿನೀದೇವತೆಗಳನ್ನು ಕರೆದು, "ನನ್ನನ್ನೇ ಯೌವನವಂತನ್ನಾಗಿ ಮಾಡಿದಿರಾದರೆ, ಶರ್ಯಾತಿ ಮಾಡುವ ಯಜ್ಞದಲ್ಲಿ ನಿಮಗೆ ಯಜ್ಞಭಾಗ ಕೊಡಿಸುತ್ತೇನೆ" ಎಂದನು. ಅಶ್ವಿನಿಗಳು ಆದಕ್ಕೆ ಒಪ್ಪಿಕೊಂಡು ಚ್ಯವನನಿಗೆ ಯಾವುದೋ

ಔಷಧವನ್ನು ನುಂಗಲು ಕೊಟ್ಟು ಹತ್ತಿರದಲ್ಲಿದ್ದ ಒಂದು ಕೊಳದಲ್ಲಿ ಮುಳುಗಲು ಹೇಳಿದರು. ಅವನು ಕೊಳದಲ್ಲಿ ಮುಳುಗಿದಾಗಲೇ ಅಶ್ವಿನಿಗಳಿಬ್ಬರೂ ಅವನೊಂದಿಗೆ ಕೊಳದಲ್ಲಿ ಮುಳುಗಿದರು.

ತರುವಾಯ ಕೊಳದಿಂದ ಮೂವರು ಯುವಕರು ಎದ್ದರು. ಅವರು ಮೂವರೂ ಒಂದೇ ವಿಧವಾಗಿದ್ದು, "ನಿನ್ನ ಗಂಡನನ್ನು ನೀನೇ ಆರಿಸಿಕೋ" ಎಂದು ಸುಕನ್ಯೆಗೆ ಹೇಳಿದರು. ಸುಕನ್ಯೆ ಹಾಗಂದವನ ಪಕ್ಕದವನನ್ನು ಬಿಟ್ಟು ಮೂರನೆಯವನನ್ನು ಆರಿಸಿದಳು. ಅವನು ಅವಳ ಗಂಡ ಚ್ಯವನನೇ.

ಆ ಸಮಯದಲ್ಲಿ ಶರ್ಯಾತಿರಾಜನು ಯಜ್ಞಕ್ಕೆ ಬೇಕಾದ ಎಲ್ಲಾ ಸಿದ್ಧತೆಗಳನ್ನೂ ಮಾಡಿ, ತನ್ನ ಮಗಳನ್ನೂ ಅಳಿಯನನ್ನೂ ಕರೆದುಕೊಂಡು ಹೋಗಲು ಬಂದನು. ತನ್ನ ಮಗಳು ಮುದುಕ ಮುನಿಯೊಂದಿಗೆ ಇರುವುದಕ್ಕೆ ಬದಲು, ತೇಜಸ್ವಿಯಾದ ಹೊಸ ಯುವಕನೊಂದಿಗೆ ಸಂಸಾರ ನಡೆಸುವುದನ್ನು ನೋಡಿ, ವ್ಯತ್ಯಾಸವಾಗಿ ತಿಳಿದು ದುಃಖಿಸಿದನು.

ಸುಕನ್ಯೆ ನಡೆದ ಸಂಗತಿಯನ್ನೆಲ್ಲಾ ತಂದೆಗೆ ಹೇಳಿ ಅವನ ದುಃಖವನ್ನು ಹೋಗಲಾಡಿಸಿದಳು. ತರುವಾಯ ಶರ್ಯಾತಿ ರಾಜನು ಚ್ಯವನನಿಂದ ಯಜ್ಞವನ್ನು ಮಾಡಿಸಲು, ಚ್ಯವನನು ತಾನು ಅಶ್ವಿನೀ ದೇವತೆಗಳಿಗೆ ಹೇಳಿದಂತೆ, ಆ ದೇವತೆಗಳಿಗೆ ಯಜ್ಞಭಾಗವನ್ನೂ ಕೊಡಿಸಿದನು. ಆದರೆ ಅರ್ಹರಲ್ಲದ ಅಶ್ವಿನಿಗಳಿಗೆ ಯಜ್ಞ ಭಾಗವನ್ನು ಕೊಡಿಸಿದ ಚ್ಯವನನ ಮೇಲೆ ದೇವೇಂದ್ರನಿಗೆ ಸಿಟ್ಟು ಬಂತು. ಅವನು ಚ್ಯವನನ ಮೇಲೆ ವಜ್ರಾಯುಧವನ್ನು ಎತ್ತಲು, ಚ್ಯವನನ ಶಕ್ತಿಯಿಂದ ಇಂದ್ರನ ಎತ್ತಿದ ಕೈ ಕೆಳಗಿಳಿಯದೆ ಹೋಯಿತು. ತರುವಾಯ ದೇವತೆಗಳ ಪ್ರಾರ್ಥನೆಯಂತೆ ಚ್ಯವನನು ಇಂದ್ರನ ಕೈ ಸರಿಯಾಗುವಂತೆ ಮಾಡಿದನು.

ಚ್ಯವನನು ಗಂಗಾ ಯಮುನಾ ಸಂಗಮದ ನೀರಲ್ಲಿ ಮುಳುಗಿ ತಪಸ್ಸು ಮಾಡುತ್ತಿದ್ದನು. ಒಂದು ದಿನ ಬೆಸ್ತರು ಮೀನಿಗಾಗಿ ಬೀಸಿದ ಬಲೆಯಲ್ಲಿ ಮೀನುಗಳೊಂದಿಗೆ ಚ್ಯವನನೂ ಬಲೆಯಲ್ಲಿ ಸಿಕ್ಕಿದನು. ಬೆಸ್ತರು ಅವನಲ್ಲಿ ಕ್ಷಮೆ ಕೇಳಿಕೊಂಡರೂ, ಚ್ಯವನನು, "ನಿಮ್ಮ ಬಲೆಯಲ್ಲಿ ಬಿದ್ದುದೆಲ್ಲವೂ ನಿಮ್ಮದೇ ಸೊತ್ತು. ನನ್ನನ್ನು ಮೀನುಗಳೊಂದಿಗೆ ಮಾರಿ ಬಿಡಿ." ಎಂದನು. ಬೆಸ್ತರು ಚ್ಯವನನನ್ನು ನಹುಷ ರಾಜನ ಬಳಿಗೆ ಕರೆದುಕೊಂಡು ಹೋಗಿ, ಸಂಗತಿಯನ್ನು ತಿಳಿಸಿ, ಅವನಿಗೆ ಬೆಲೆಕಟ್ಟಲು ಕೇಳಿಕೊಂಡರು. ಬ್ರಾಹ್ಮಣನ ಬೆಲೆಯೂ ಗೋವಿನ ಬೆಲೆಯೂ ಒಂದೇ ಎಂದು ಹೇಳಿ ನಹುಷನು ಬೆಸ್ತರಿಗೆ ಒಂದು ಗೋವನ್ನು ಕೊಟ್ಟು ಕಳುಹಿಸಿದನು. ನಹುಷನ ಅನುಮತಿಯಿಂದ ಚ್ಯವನನು ಮತ್ತೆ ಆಶ್ರಮಕ್ಕೆ ಹೋದನು.





# ಪರಶುರಾಮ

ಹೈಹಯ ವಂಶದವನಾದ ಕಾರ್ತವೀರ್ಯನೆಂಬ ರಾಜನು, ಬೇಟೆಯಾಡಲು ಕಾಡಿಗೆ ಹೋಗಿ, ಜಮದಗ್ನಿ ಮಹಾಮುನಿಯ ಆಶ್ರಮವನ್ನು ಅನ್ಯಾಯವಾಗಿ ಧ್ವಂಸಮಾಡಿದನು.



ಆ ಸಮಯದಲ್ಲಿ ಜಮದಗ್ನಿಯ ಮಗ ಪರಶುರಾಮನು ಆಶ್ರಮದಲ್ಲಿರಲಿಲ್ಲ. ಅವನು ಬಂದು ನಡೆದ ಘೋರವನ್ನು ನೋಡಿ, ತನ್ನ ಕೊಡಲಿಯಿಂದ ಮದೋನ್ಮತ್ತನಾದ ಕಾರ್ತವೀರ್ಯನ ತಲೆಯನ್ನು ಕಡಿದನು.



ಮಾರನೇ ದಿನ ಕಾರ್ತವೀರ್ಯನ ಕುಮಾರರು ಜಮದಗ್ನಿ ತಪಸ್ಸಮಾಧಿಯಲ್ಲಿರುವ ಸ್ಥಳಕ್ಕೆ ಬಂದು ಅವನನ್ನು ಕೊಂದರು. ಆಗ ಕೂಡಾ ಪರಶುರಾಮನು ಅಲ್ಲಿರಲಿಲ್ಲ.



ಮರುದಿನ ಪರಶುರಾಮನು ತನ್ನ ಕೊಡಲಿಯೊಂದಿಗೆ ಹೋಗಿ ಕಾರ್ತವೀರ್ಯನ ಕುಮಾರರನ್ನು ಪ್ರತಿಭಟಿಸಿ ಎಲ್ಲರನ್ನೂ ಕೊಂದನು. ಬ್ರಾಹ್ಮಣನಾದರೂ ಅವನ ಶೌರ್ಯ ಪ್ರತಾಪಗಳ ಮುಂದೆ ಕ್ಷತ್ರಿಯರಾರೂ ನಿಲ್ಲಲಾರದೆ ಹೋದರು.

ತಂದೆಯ ವಧೆಗೆ ಹಗೆ ತೀರಿಸಿಕೊಂಡ ಪರಶುರಾಮನು, ಅಷ್ಟಕ್ಕೆ ನಿಲ್ಲದೆ, ಕ್ಷತ್ರಿಯರೆಲ್ಲಾ ಕ್ರೂರರು, ದುರ್ಜನರು ಎಂದುಕೊಂಡು ಕ್ಷತ್ರಿಯ ಜಾತಿಯನ್ನೇ ನಿರ್ಮೂಲಿಸಲು ನಿಶ್ಚಯಿಸಿದನು.





ಪರಶುರಾಮನು ಇಪ್ಪತ್ತೊಂದು ಸಾರಿ ಭೂಸಂಚಾರಮಾಡಿ ಕ್ಷತ್ರಿಯರ ವಂಶವನ್ನೇ ನಿರ್ಮೂಲಗೊಳಿಸಿ ಕ್ಷತ್ರಿಯ ರಕ್ತದ ಮಡುವಿನಿಂದಲೇ ತನ್ನ ತಂದೆಗೆ ಜಲತರ್ಪಣ ಬಿಟ್ಟನು.

ತರುವಾಯ ಅವನು ದೊಡ್ಡ ಯಾಗವನ್ನು ಮಾಡಿ, ತಾನು ಕ್ಷತ್ರಿಯರನ್ನು ಕೊಂದು ಗೆದ್ದು ಕೊಂಡ ಭೂಮಂಡಲವನ್ನೆಲ್ಲಾ ಕಶ್ಯಪನಿಗೆ ದಾನಮಾಡಿ, ತಪಸ್ಸುಮಾಡಲು ಮಹೇಂದ್ರ ಪರ್ವತಕ್ಕೆ ಹೋದನು.





ಪ್ರಪಂಚಕ್ಕೆ ಕ್ಷತ್ರಿಯರ ಕಾಟ ಹೋದರೂ ರಾಕ್ಷಸರ ಕಾಟ ಹೋಗಿರಲಿಲ್ಲ. ಅವರು ವಿಜೃಂಭಿಸಿ ಪ್ರಜೆಗಳನ್ನು ಬಗೆ ಬಗೆಯಾಗಿ ಕಾಡುತ್ತಲೇ ಇದ್ದರು.

ಪರಶುರಾಮನಿಗೆ ಈ ಸಂಗತಿ ಗೊತ್ತಾಯಿತು. ಅವನು ಶಿವನನ್ನು ಪ್ರಾರ್ಥಿಸಿ ರಾಕ್ಷಸರನ್ನು ಸಂಹಾರಮಾಡಲು, ತಕ್ಕ ಶಕ್ತಿಗಳನ್ನು ಪಡೆದು ಮಹೇಂದ್ರ ಪರ್ವತದಿಂದ ಕೆಳಗಿಳಿದನು.





ಶಿವನ ಅನುಗ್ರಹದಿಂದ ಇನ್ನಷ್ಟು ಶಕ್ತಿವಂತನಾದ ಪರಶುರಾಮನು, ಕಂಡ ಕಂಡ ರಾಕ್ಷಸರನ್ನೆಲ್ಲಾ ಹುಲ್ಲು ಹರಿದ ಹಾಗೆ ಹರಿದು, ಪ್ರಪಂಚಕ್ಕಿದ್ದ ರಾಕ್ಷಸರ ಭಯವನ್ನೂ ಹೋಗಲಾಡಿಸಿದನು.

ಆ ಕಾಲದಲ್ಲಿ ಯುವಕನಾಗಿದ್ದ ದಶರಥ ಕುಮಾರ ರಾಮನು ಮಿಥಿಲೆಯಲ್ಲಿ ಶಿವಧನುಸ್ಸನ್ನು ಮುರಿದು ಸೀತೆಯನ್ನು ಮದುವೆಯಾದನು. ಅಲ್ಲಿಂದ ರಾಮನು ಪರಿವಾರದೊಂದಿಗೆ ಅಯೋಧ್ಯೆಗೆ ಹಿಂದಿರುಗುತ್ತಿದ್ದನು.





ಆಗ ಪರಶುರಾಮನು ರಾಮನನ್ನು ಪ್ರತಿಭಟಿಸಿ, ತನ್ನ ಹತ್ತಿರವಿದ್ದ ವಿಷ್ಣು ಧನುಸ್ಸಿಗೆ ಬಾಣ ಹೂಡಲು ಹೇಳಿದನು. ರಾಮನು ಲೀಲಾಜಾಲವಾಗಿ ವಿಷ್ಣು ಧನುಸ್ಸನ್ನು ಎತ್ತಿ ಬಾಗಿಸಲು, ರಾಮನು ತನ್ನಹಾಗೆ ಅವತಾರ ಪುರುಷನೆಂದು ತಿಳಿದು ಪರಶುರಾಮನು, ತನ್ನ ಶಕ್ತಿಯನ್ನೆಲ್ಲಾ ರಾಮನಿಗೇ ಧಾರೆಯೆರೆದು, ನಿಶ್ಚಿಂತನಾಗಿ ತಪಸ್ಸಿಗೆ ಹೊರಟುಹೋದನು.



# ಗರುತ್ಮಂತ

ಕಶ್ಯಪನಿಗೆ ವಿನತೆ ಮತ್ತು ಕದ್ರುವ ಎಂಬ ಇಬ್ಬರು ಹೆಂಡತಿಯರಿದ್ದರು. ವಿನತೆಯ ಮಗನು ಗರುತ್ಮಂತ. ಕದ್ರುವಳಿಗೆ ನಾಗರೆಂಬ ಅನೇಕ ಮಂದಿ ಮಕ್ಕಳು. ವಿನತೆ ಒಂದು ಪಂದ್ಯದಲ್ಲಿ ಕಟ್ಟುಬಿದ್ದು ಕದ್ರುವಳಿಗೆ ದಾಸಿಯಾಗಿದ್ದುದರಿಂದ, ಅವಳ ಮಗ ಗರುತ್ಮಂತನೂ ನಾಗರಿಗೆ ಸೇವೆ ಮಾಡಬೇಕಾಗಿತ್ತು.

ಒಂದು ದಿನ ಗರುತ್ಮಂತನು ತನ್ನ ತಾಯಿಯೊಂದಿಗೆ, "ಅಮ್ಮಾ, ನಾನು ಅತ್ಯಂತ ಬಲಿಷ್ಠನಾಗಿರುವವನು. ಹಾಗಿರುವಾಗ ನೀನು ಕದ್ರುವಳಿಗೂ ಅವಳ ಮಕ್ಕಳಿಗೂ ಏಕೆ ದಾಸಿಯಾಗಿರಬೇಕು? ಕಾರಣವೇನು?" ಎಂದು ಕೇಳಿದನು.

"ಮಗನೇ, ಸ್ವರ್ಗದ ಬಿಳೀ ಕುದುರೆಯೊಂದು ಮೇಯಲು ಬಂದುದನ್ನು ನೋಡಿ ನಾನು ಪೂರ್ಣ ಬಿಳೀ ಕುದುರೆ ಎಂದೆನು. ಕದ್ರುವ ಬಾಲದಲ್ಲಿ ಕಪ್ಪು ಇದೆ ಎಂದಳು. ನಾನು ಇಲ್ಲವೆಂದೆ. ಕಡೆಗೆ ನೋಡುವಾಗ ಬಾಲದಲ್ಲಿ ಕಪ್ಪು ಇದ್ದುದರಿಂದ ಅವಳು ಗೆದ್ದಳು. ಪಂದ್ಯದ ನಿಬಂಧನೆಯಂತೆ ನಾನೂ ನೀನೂ ದಾಸ್ಯ ಮಾಡಬೇಕಾಯಿತು." ಎಂದಳು ವಿನತ. ಅಷ್ಟು ತಿಳಿದು ಗರುತ್ಮಂತನು ಕದ್ರುವಳ ಬಳಿಗೆ ಹೋಗಿ, "ಅಮ್ಮಾ, ನಮ್ಮನ್ನು ನಿಮ್ಮ ದಾಸ್ಯದಿಂದ ಮುಕ್ತ ಮಾಡಬೇಕಾದರೆ, ಏನು ಮಾಡಬೇಕೆಂದು ಹೇಳು." ಎಂದು ಕೇಳಿದನು.

"ನಮಗೆ ಅಮೃತ ತಂದು ಕೊಟ್ಟರೆ ನಿಮ್ಮನ್ನು ಮುಕ್ತ ಮಾಡುತ್ತೇನೆ" ಎಂದಳು ಕುದ್ರುವ.

ಗರುತ್ಮಂತನು ಅದಕ್ಕೆ ಒಪ್ಪಿಕೊಂಡನು. ತಾನು ಅಮೃತ ತರಲು ಹೋಗುವೆನೆಂದು ತಾಯಿಯೊಂದಿಗೆ ಹೇಳಿ, ದೇವಲೋಕಕ್ಕೆ ಹೋದನು. ಅಲ್ಲಿ ಅಮೃತವನ್ನು ಬಲವಾದ ಕಾವಲಿನಲ್ಲಿ ರಕ್ಷಿಸಿಕೊಂಡಿದ್ದರು. ಅಮೃತ ಭಾಂಡದ ಸುತ್ತಲೂ ಅಗ್ನಿಯನ್ನು ಏರ್ಪಡಿಸಿದ್ದರು. ಅಮೃತ ಭಾಂಡದ ಮೇಲುಗಡೆಯಲ್ಲಿ ಚಕ್ರವು ತಿರುಗುತ್ತಿದ್ದಿತು. ಎರಡು ಮಹಾಸರ್ಪಗಳೂ ಕಾವಲು ಕಾಯುತ್ತಿದ್ದುವು. ಇಷ್ಟನ್ನೂ ಮೀರಿ ಹೋಗಲು ಯಾರಿಗೂ ಸಾಧ್ಯವಾಗದು.

ಆದರೆ ಮಹಾಬಲ ಧೈರ್ಯಗಳುಳ್ಳ ಗರುತ್ಮಂತನು ಅಮೃತ ರಕ್ಷಕರನ್ನು ಯುದ್ಧದಲ್ಲಿ ಓಡಿಸಿ, ಬೆಂಕಿಯನ್ನು ಆರಿಸಿ, ಸರ್ಪಗಳನ್ನು ಸದೆ ಬಡಿದು ಉಪಾಯದಿಂದ ಚಕ್ರದ ಕೆಳಗೆ ತೂರಿ ಅಮೃತ ಭಾಂಡವನ್ನೆತ್ತಿಕೊಂಡು ಹಿಂದಿರುಗಿದನು. ಈ

ಸಂಗತಿಯನ್ನು ಕೇಳಿ ಇಂದ್ರನು ಕನಲಿ, ಗರುತ್ಮಂತನ ಮೇಲೆ ವಜ್ರಾಯುಧವನ್ನು ಬೀಸಿದನು. ಅದರ ಪೆಟ್ಟಿಗೆ ಗರುತ್ಮಂತನ ಒಂದು ಗರಿ ಮಾತ್ರ ಉದುರಿತು. ಇಂದ್ರನು ಗರುತ್ಮಂತನೊಂದಿಗೆ ಯುದ್ಧವು ಸಾಧ್ಯವಿಲ್ಲವೆಂದು ತಿಳಿದು, ಅವನೊಂದಿಗೆ ಸಂಧಿ ಮಾಡಿಕೊಂಡು, ಅಮೃತವನ್ನು ಯಾರೂ ಕುಡಿಯದಂತೆ ನೋಡಿಕೊಳ್ಳಬೇಕೆಂದು ಹೇಳಿದನು.

"ನನ್ನ ತಾಯಿಯ ದಾಸ್ಯವಿಮುಕ್ತಿಗಾಗಿಯೇ ಈ ಅಮೃತವನ್ನು ಒಯ್ದು ಕೊಡುವುದಷ್ಟು ನನ್ನ ಬಾಧ್ಯತೆ. ಅವರು ಕುಡಿಯುವುದರೊಳಗೇ ಹಿಂದಿರುಗಿಸಿಬಿಡುತ್ತೇನೆ" ಎಂದನು ಗರುತ್ಮಂತ.

ಅವನು ನೇರಾಗಿ ಅಮೃತಭಾಂಡವನ್ನು ತಂದು ಕದ್ರುವಳ ಹಾಗು ಅವಳ ಕುಮಾರರ ಮುಂದೆ ದರ್ಭೆ ಹುಲ್ಲಿನ ಮೇಲೆ ಇಟ್ಟು, ತನ್ನ ತಾಯಿಯ ದಾಸ್ಯ ವಿಮೋಚನೆಯಾಯಿತೆಂದು ಅವಳಿಂದ ಒಪ್ಪಿಸಿದನು. ಆಮೇಲೆ ಕದ್ರುವಳ ಮಕ್ಕಳಾದ ಸರ್ಪಗಳು ಅಮೃತವನ್ನು ಕುಡಿಯಲು ಬರುವಷ್ಟರೊಳಗೆ, ಅಮೃತ ಭಾಂಡವನ್ನೆತ್ತಿಕೊಂಡು ಹೋಗಿ ಸ್ವರ್ಗಕ್ಕೆ ಒಪ್ಪಿಸಿ ನಡೆದುಬಿಟ್ಟನು.

ಕಡೆಗೆ ಕದ್ರುವ ಪುತ್ರರು ದರ್ಭೆಯಲ್ಲಿ ಅಮೃತವು ಅಂಟಿರಬಹುದೆಂಬ ಆಶೆಯಲ್ಲಿ ದರ್ಭೆಗಳನ್ನು ನೆಕ್ಕಿ ನಾಲಗೆಗಳನ್ನು ಸೀಳಿಸಿಕೊಂಡುವಂತೆ!

ಗರುತ್ಮಂತನ ಶಕ್ತಿ ಸಾಮರ್ಥ್ಯಗಳನ್ನು ದೇವತೆಗಳೆಲ್ಲಾ ಕೊಂಡಾಡತೊಡಗಿದರು. ವಿಷ್ಣು ಗರುತ್ಮಂತನನ್ನು ಕರೆದು ತನ್ನ ವಾಹನವಾಗಿರಲು ಕೇಳಿಕೊಂಡನು. ಇಂದ್ರನು ಸರ್ಪಗಳು ಅವನ ಆಹಾರವಾಗಲೆಂದನು.

ಇಂದ್ರನ ಸಾರಥಿಯಾದ ಮಾತಲಿಗೆ ಗುಣಕೇಶಿ ಎಂಬ ಮಗಳಿದ್ದಳು. ಅವಳನ್ನು ಸುಮುಖನೆಂಬ ನಾಗಕುಮಾರನಿಗೆ ಕೊಟ್ಟು ಮದುವೆ ಮಾಡಬೇಕೆಂದು ಮಾತಲಿ ಅಂದುಕೊಂಡಿದ್ದನು. ಆ ಸುಮುಖನೆಂಬ ನಾಗನನ್ನು ಗರುತ್ಮಂತನು ತಿನ್ನುವುದಾಗಿ ನಿಶ್ಚಯಿಸಿದ್ದು ಮಾತಲಿಗೆ ಗೊತ್ತಾಯಿತು. ಮಾತಲಿ ಇಂದ್ರನನ್ನು ಕರೆದುಕೊಂಡು ವಿಷ್ಣುವಿನ ಬಳಿಗೆ ಹೋಗಿ, ಸುಮುಖನನ್ನು ಚಿರಾಯುವನ್ನಾಗಿ ಮಾಡಬೇಕೆಂದು ಪ್ರಾರ್ಥಿಸಿಕೊಂಡನು. ಇಂದ್ರನೂ ಅದನ್ನು ಬೆಂಬಲಿಸಿದನು. ಆಗ ಗರುತ್ಮಂತನು ಅತ್ಯಂತ ಕೋಪದಿಂದ, ತನಗೆ ಇದಿರಾಗಿ ಹೇಳುವವರು ಯಾರೂ ಇಲ್ಲ, ತಾನು ಮಹಾ ಬಲಶಾಲಿಯಾದುದರಿಂದ ಯಾರ ಮಾತಿಗೂ ಬಗ್ಗ ಬೇಕಾಗಿಲ್ಲವೆಂಬಂತೆ ವರ್ತಿಸಿದನು. ಆಗ ವಿಷ್ಣು "ನಿನ್ನ ಬಲ ಎಷ್ಟರದು?" ಎಂದು ತನ್ನ ಕೈಯನ್ನು ಗರುತ್ಮಂತನ ಮೇಲೆ ಇಟ್ಟನು. ಗರುತ್ಮಂತನು ಅದರ ಭಾರವನ್ನು ತಾಳಲಾಗದೆ, ಗರ್ವಬಿಟ್ಟು ಅವರ ಆಜ್ಞೆಗೆ ವಿಧೇಯನಾದನು. ಮಾತಲಿಯ ಕೋರಿಕೆ ನೆರವೇರಿತು.





# ಮೃತನ ಮದುವೆ

ನಂದೀ ನದಿಯಿಂದ ಸುಮಾರು ಐವತ್ತು ಮೈಲು ದೂರದಲ್ಲಿ ರುದ್ರಪುರವೂ ದೇವಗಿರಿಯೂ ಅಕ್ಕಪಕ್ಕದ ರಾಜ್ಯಗಳಾಗಿದ್ದುವು. ರುದ್ರಪುರ ರಾಜಕುಮಾರಿ ರೂಪವತಿಯನ್ನು ದೇವಗಿರಿಯ ರಾಜನಾದ ದೇವಪಾಲನು ವಿವಾಹವಾಗಿದ್ದನು. ವಿವಾಹವಾಗಿ ಅನೇಕ ವರ್ಷಗಳು ಸಂದರೂ ಮಕ್ಕಳಾಗಿರಲಿಲ್ಲ. ಆ ಕಾರಣದಿಂದ, ಬಂಧುಗಳ ಮತ್ತು ಹಿತಚಿಂತಕರ ಸಲಹೆಯ ಮೇರೆಗೆ ದೇವಪಾಲನು ಕಾಳಿಂದಿ ಎಂಬ ಯುವತಿಯನ್ನು ಮದುವೆಯಾದನು. ಅವಳು ನೋಡಲು ಸುಂದರಿಯಾಗಿರುವವಳಾದರೂ ಒಳ್ಳೆಯ ಗುಣದವಳಾಗಿರಲಿಲ್ಲ. ಅವಳ ಹೃದಯದಲ್ಲಿ ತುಂಬ ಅಸೂಯೆ ಮನೆ ಮಾಡಿತ್ತು. ಅದೃಷ್ಟವೋ ದುರದುಷ್ಟವೋ ಕಾಳಿಂದಿಗೆ ಕೂಡಾ ಮಕ್ಕಳಾಗಲಿಲ್ಲ. ವರ್ಷಗಳು ಮಾತ್ರ ಸುಮ್ಮನೆ ಉರುಳುತ್ತಿದ್ದುವು.

ಈ ಪರಿಸ್ಥಿತಿಯಲ್ಲ ಒಂದು ದಿನ ದೇವಪಾಲ ರಾಜನು ಬೇಟೆಯಾಡಲು ಅರಣ್ಯದ ಕಡೆಗೆ ಹೋದನು. ಬೇಟೆಯಾಡುತ್ತಾ ಒಂದು ಮೃಗವನ್ನು ಅಟ್ಟಿಸಿಕೊಂಡು ಪರಿವಾರಕ್ಕೆ ದೂರವಾಗಿ ಓಡುತ್ತಾ ಮೃಗವೂ ತಪ್ಪಿತು, ದಾರಿಯೂ ತಪ್ಪಿತು, ಕತ್ತಲೆಯೂ ಆಯಿತು. ದೇವಪಾಲನು ಅಲ್ಲಿ ಇಲ್ಲಿ ತಿರುಗುತ್ತಾ ಒಂದು ಕುಟೀರವನ್ನು ನೋಡಿ ಅಲ್ಲಿಗೆ ಹೋದನು. ಅದರೊಳಗೆ ಕುಳಿತಿದ್ದ ಒಬ್ಬ ಯೋಗಿ, ದೇವಪಾಲನಿಗೆ ಆತಿಥ್ಯವನ್ನು ಕೊಟ್ಟು, ಅವನ ವಿವರಗಳನ್ನು ತಿಳಿದನು. ಮುಖ್ಯವಾಗಿ ಅವನಿಗೆ ಸಂತಾನವಿಲ್ಲದ ದುಃಖವಿರುವುದನ್ನು ತಿಳಿದು ಬಂಗಾರದ ಒಂದು ಗೊಲುಸು ಸರವನ್ನು ಅವನಿಗೆ ಕೊಟ್ಟು, "ಇದನ್ನು ನಿನ್ನ ಹಿರಿಯ ರಾಣಿಯ ಕೊರಳಿಗೆ ಹಾಕು. ಆಮೇಲೆ ಕೊರಳಿನಿಂದ ತೆಗೆಯಲೇ ಬಾರದು. ಅವಳು ಗರ್ಭಿಣಿಯಾಗುತ್ತಾಳೆ. ಕಾಲಕ್ರಮದಲ್ಲಿ ಗಂಡು ಮಗುವನ್ನು ಹಡೆಯುತ್ತಾಳೆ, ಆಗ ಈ ಗೊಲುಸು ಸರವನ್ನು ತೆಗೆದು ಮಗುವಿನ ಕೊರಳಿಗೆ ಹಾಕಬೇಕು. ಯಾವ ಪರಿಸ್ಥಿತಿಯಲ್ಲಿಯೂ ಅದನ್ನು ಹುಡುಗನ ಕೊರಳಿನಿಂದ ತೆಗೆಯಬಾರದು. ಹಾಗೇನಾದರೂ ತೆಗೆದರೆ ಅವನು ಮೃತಸದೃಶನಾಗುತ್ತಾನೆ. ಮತ್ತೆ ಆ ಗೊಲುಸು ಸರವನ್ನು ಕೊರಳಿಗೆ ಹಾಕಿದರೇನೇ ಏಳುತ್ತಾನೆ." ಎಂದು ಹೇಳಿದನು.

ಬೆಳಗಾದ ಮೇಲೆ ದೇವಪಾಲನು ಆ ಯೋಗಿ ಕೊಟ್ಟ ಗೊಲುಸು ಸರ ತೆಗೆದುಕೊಂಡು, ಅಲ್ಲಿಂದ

ಪಿ. ಸಿ. ಸರ್ಕಾರ್, ಐಂದ್ರಜಾಲಿಕರು



ಹೊರಟನು. ಯೋಗಿ ಹೇಳಿದಂತೆಯೇ ಆ ಗೊಲುಸು ಸರದ ಮಹಿಮೆಯಿಂದ ಹಿರಿಯ ರಾಣಿ ಗರ್ಭಿಣಿ ಯಾದಳು. ಸಕಾಲದಲ್ಲಿ ಸುಂದರವಾದೊಂದು ಗಂಡು ಮಗುವನ್ನೂ ಹೆತ್ತಳು. ಆ ಮಗುವಿಗೆ ಪ್ರಾಣ ವಿರುವಂತೆ ಕಾಣಲಿಲ್ಲ. ರೂಪವತಿಯು ಕೊರಳಲ್ಲಿದ್ದ ಗೊಲುಸು ಸರವನ್ನು ಮಗುವಿನ ಕೊರಳಿಗೆ ಹಾಕಿದ ಕೊಡಲೇ ಮಗು ಕೈ ಕಾಲಾಡಿಸುತ್ತ ಅಳಲು ಶುರು ಮಾಡಿ, ಪ್ರಾಣವಿರುವುದನ್ನು ರುಜುಪಡಿಸಿತು.

ತನ್ನ ಸವತಿ ಗರ್ಭಿಣಿಯಾದಂದಿನಿಂದಲೇ ರಾಜನ ಎರಡನೇ ಹೆಂಡತಿ ಕಾಳಿಂದಿ ಅಸೂಯೆಯಿಂದ ಬೇಯ ತೊಡಗಿದ್ದಳು. ಯೋಗಿ ಕೊಟ್ಟ ಗೊಲುಸು ಸರ ವನ್ನು ತನ್ನ ಕೊರಳಿಗೆ ಹಾಕದಿರುವುದನ್ನು ನೋಡಿ ರಾಜನ ಮೇಲೆಯೂ ಅವಳು ಸಿಟ್ಟಾಗಿದ್ದಳು. ಅವಳ ಮನಸ್ಸಿನ ಸ್ಥಿತಿಯನ್ನು ರಾಜನೂ ತಿಳಿದುಕೊಂಡು, ಅವಳಿಂದ ತನ್ನ ಮಗನಿಗೆ ಅಪಾಯಬಾರದಂತೆ ಬೇಕಾದ ಬಂದೋಬಸ್ತುಗಳನ್ನೆಲ್ಲ ಮಾಡಿದನು.

ಸಮುಹೂರ್ತದಲ್ಲಿ ಮಗನಿಗೆ ಗೋಲಾಪನೆಂದು ನಾಮಕರಣವೂ ಆಯಿತು. ಗೋಲಾಪನು ಯಾವ ಅಪಾಯಕ್ಕೂ ಸಿಕ್ಕಿಬೀಳದೆ ಬೆಳೆಯುತ್ತ ಹದಿನೆಂಟು ವಯಸ್ಸಿನ ಯುವಕನಾದನು. ಆ ಕಾಲಕ್ಕೆ ರಾಜನು ವೃದ್ಧನಾಗಿ ತೀರಿಹೋದನು.

ರಾಜಭವನವು ಶೋಕಸಮುದ್ರದಲ್ಲಿ ಮುಳುಗಿ, ರಾಜನ ಅಪರಕರ್ಮಾದಿಗಳು ನಡೆಯುವ ಗೊಡವೆ ಗಳಲ್ಲಿ ಗೋಲಾಪನ ರಕ್ಷಣೆಯ ಏರ್ಪಾಡು ಸಡಿ ಲಾಗಿಹೋಯಿತು. ಸಮಯ ಹೊಂಚುತ್ತಿದ್ದ ಧೂರ್ತ ಳಾದ ಕಾಳಿಂದಿ ಒಂದು ರಾತ್ರಿಯಲ್ಲಿ ಗೋಲಾಪನು ನಿದ್ರೆಯಲ್ಲಿರುವಾಗ ಅವನ ಕೊರಳಲ್ಲಿದ್ದ ಗೊಲುಸು ಸರವನ್ನು ತೆಗೆದು ಬಚ್ಚಿಟ್ಟುಬಿಟ್ಟಳು. ಶವದ ಹಾಗೆ ಬಿದ್ದಿರುವ ಗೋಲಾಪನ ಸಮೀಪದಲ್ಲಿ ನಿಂತು ಅವಳು, "ಹಾವು! ಹಾವು!" ಎಂದು ಕೂಗುತ್ತ ಎಲ್ಲರನ್ನೂ ನಿದ್ರೆಯಿಂದ ಎಬ್ಬಿಸಿದಳು. ಸತ್ತಂತೆ ಗೋಲಾಪನನ್ನು ನೋಡಿ, ಅವನು ಹಾವಿನ ಕಡಿತ ದಿಂದ ವಿಷವೇರಿ ಸತ್ತನೆಂದೇ ಎಲ್ಲರೂ ತಿಳಿದರು.

ಮರುದಿನ ಕಾಳಿಂದಿ ಮಂತ್ರಿಯನ್ನು ಕರೆದು ಗೋಲಾಪನಿಗೆ ದಹನಕ್ರಿಯೆ ನಡೆಸಬೇಕೆಂದು, ದುಃಖವನ್ನು ನಟಿಸುತ್ತಾ ಹೇಳಿದಳು. ಗಂಡನು ತೀರಿಹೋದ ಶೋಕದ ಜತೆಯಲ್ಲಿ, ಮಗನು ಹೀಗೆ ಬಿದ್ದಿರುವುದನ್ನು ನೋಡಿ, ರೂಪವತಿಯ ದುಃಖ ತಾಳಲಸಾಧ್ಯವಾಯಿತು. ಮಗನ ಕೊರಳಲ್ಲಿ ಗೊಲುಸು ಸರ ಇಲ್ಲದಿರುವುದನ್ನು ನೋಡಿ, ಮಂತ್ರಿ ಯೊಂದಿಗೆ, "ನನ್ನ ಮಗ ನಿಜವಾಗಿ ಸತ್ತಿಲ್ಲ. ಕಾಳಿಂದಿ ಹೇಗೋ ಗೊಲುಸು ಸರ ತೆಗೆದುಕೊಂಡಿದ್ದಾಳೆ. ಆದುದರಿಂದಲೇ ಹುಡುಗ ಸತ್ತ ಹಾಗೆ ಬಿದ್ದಿದ್ದಾನೆ. ಇದೆಲ್ಲಾ ಅವಳದೇ ಕೆಲಸ" ಎಂದು ಗುಟ್ಟಾಗಿ ಹೇಳಿದಳು. ಮಂತ್ರಿ ಕಾಳಿಂದಿಯ ಹತ್ತಿರ ಬಂಗಾರದ ಗೊಲುಸು ಸರದ ಸಂಗತಿಯನ್ನು ಪ್ರಸ್ತಾವಿಸಲು, ತನಗೆ ಆ ಸಂಗತಿಯೊಂದೂ ಗೊತ್ತಿಲ್ಲವೆಂದಳು.

ಆಗ ಮಂತ್ರಿ ಅವಳೊಂದಿಗೆ, "ಅಮ್ಮಾ, ಈ ಪರಿಸ್ಥಿತಿಯಲ್ಲಿ ಗೋಲಾಪನ ದಹನ ಕಾರ್ಯವು ನಡುರಾತ್ರಿ ರಹಸ್ಯವಾಗಿ ನಡೆದರೇನೇ ಒಳ್ಳೆಯದು. ಈಗಾಗಲೇ ಅವನು ಹಾವು ಕಡಿದು ಸತ್ತ ವಿಷಯ ವಾಗಿ ಜನರಲ್ಲಿ ಅನುಮಾನವೆದ್ದಿದೆ. ದಂಗೆ ಏಳುವ ಹಾಗಿದೆ" ಎಂದನು, "ಹಾಗಾದರೆ ರಹಸ್ಯವಾಗಿಯೇ ಮುಗಿಸಿಬಿಡಿರಪ್ಪ. ದೊಡ್ಡವಳು ಒಪ್ಪಿದರೆ ನನ್ನ ದೇನಿದೆ ?" ಎಂದಳು ಕಾಳಿಂದಿ.

ಮಂತ್ರಿಯ ಏರ್ಪಾಡಿನಂತೆ ಅರ್ಧರಾತ್ರಿಯಲ್ಲಿ ನದಿಯಲ್ಲಿ ಒಂದು ದೋಣಿ ತಯಾರಾಗಿತ್ತು. ಮಂತ್ರಿ ಕೆಲ ಮಂದಿ ಸಹಾಯಕರೊಂದಿಗೆ ಗೋಲಾಪನ ಕಳೇಬರವನ್ನೂ ರೂಪವತಿಯನ್ನೂ ದೋಣಿಯಲ್ಲಿ ಸೇರಿಸಿ, ರುದ್ರಪುರಕ್ಕೆ ಕಳುಹಿಸಿಬಿಟ್ಟನು. ಆದರೆ ಧೂರ್ತಳಾದ ಕಾಳಿಂದಿ, ಗೋಲಾಪನ ದಹನ ಕಾರ್ಯವು ನಡೆಯಲಿಲ್ಲವೆಂಬುದನ್ನು ಹೇಗಾದರೂ ತಿಳಿದುಕೊಳ್ಳಬಹುದೆಂದು ಅವನಿಗೆ ತೋರಿತು. ಅಂತಲೇ ಅವನು ಬೆಳಂಜಾವದಲ್ಲಿ ಕಾಳಿಂದಿಯನ್ನು ಎಬ್ಬಿಸಿ, "ಅಮ್ಮಾ! ಏನು ಹೇಳಲಿ? ತುಂಬ ಘೋರ ನಡೆಯಿತು. ಶವವನ್ನು ನದಿಯಾಚೆಗಿನ ಮರು ಭೂಮಿಯಲ್ಲಿ ದಹನ ಮಾಡಲು ಒಯ್ಯು ತ್ತಿರುವಾಗ ಸುಳಿಯಲ್ಲಿ ಸಿಕ್ಕಿ ದೋಣಿ ಮುಳುಗಿ ಶವವೂ ರೂಪವತಿಯೂ ಪ್ರವಾಹದಲ್ಲಿ ಹೊಡೆದು ಕೊಂಡು ಹೋದರಂತೆ. ಈಜಿ ದಡ ಸೇರಿದವರು ಬಂದು ಹೇಳಿದರು" ಎಂದನು. ಕಾಳಿಂದಿ ಗಾಬರಿ ಯಿಂದ, "ಶವವನ್ನು ಹುಡುಕಲು ಆಳುಗಳನ್ನು ಕಳಿಸಿರಿ. ನದಿಯಲ್ಲೆಲ್ಲಾ ಹುಡುಕಲಿ" ಎಂದಳು.

"ಇಷ್ಟು ಹೊತ್ತಿಗೆ ಅವರಿಬ್ಬರ ಶವಗಳೂ ಸಮುದ್ರಕ್ಕೆ ಸೇರಿರಬಹುದು, ಹುಡುಕಿ ಪ್ರಯೋಜನ ವಿಲ್ಲಮ್ಮಾ" ಎಂದನು ಮಂತ್ರಿ.

ತನ ಕಣ್ಣೆದಿರಿನಲ್ಲಿ ಗೋಲಾಪನ ಅಸ್ಥಿಗಳನ್ನು ನದಿಯಲ್ಲಿ ಬೆರೆಸುವ ಅವಕಾಶ ತಪ್ಪಿಹೋಯಿತೆಂದು



ಕಾಳಿಂದಿಗೆ ತುಂಬ ನಿರಾಶೆಯಾಯಿತು, ಬೇರೆ ಉಪಾಯವಿಲ್ಲದೆ ಸಮಾಧಾನ ಮಾಡಿಕೊಂಡಳು.

ಇಷ್ಟರೊಳಗೆ ರೂಪವತಿ ತನ್ನ ಮಗನ ಕಳೇಬರ ದೊಂದಿಗೆ ರುದ್ರಪುರವನ್ನು ಸೇರಿ, ತನ್ನ ಅಣ್ಣ ಚಂದನನೊಂದಿಗೆ ನಡೆದ ಸಂಗತಿಯನ್ನೆಲ್ಲಾ ಹೇಳಿದಳು. ಚಂದನನಿಗೆ ಸಾವಿತ್ರಿ ಎಂಬ ಮಗಳಿದ್ದಳು. ಅವಳನ್ನು ಗೋಲಾಪನಿಗೆ ಕೊಟ್ಟು ಮದುವೆ ಮಾಡಬೇಕೆಂದು ಈ ಮೊದಲೇ ನಿಶ್ಚಯಿಸಿಕೊಂಡಿದ್ದರು. ಈಗ ಶವ ರೂಪದಲ್ಲಿರುವ ಗೋಲಾಪನನ್ನು ನೋಡಿ ಸಾವಿತ್ರಿಗೂ ಚಂದನನಿಗೂ ಆದ ದುಃಖಕ್ಕೆ ಮೇರೆ ಯಿಲ್ಲದೆ ಹೋಯಿತು. ಇನ್ನು ಗೋಲಾಪನು ಬದುಕ ಬೇಕಾದರೆ ಯೋಗಿಯ ಗೊಲುಸು ಸರ ಸಿಗಬೇಕಾ ಗಿತ್ತು. ದುಷ್ಟಳಾದ ಕಾಳಿಂದಿಯ ಹತ್ತಿರವಿರುವ ಅದನ್ನು ಹೇಗೆ ವಶಪಡಿಸಿಕೊಳ್ಳುವುದು? ಹೇಗಾ ದರೂ ಅದನ್ನು ಸಂಪಾದಿಸದೆ ಬೇರೆ ದಾರಿಯೇ ಇರಲಿಲ್ಲ. ತಾನೇ ಆ ಕಾರ್ಯವನ್ನು ಸಾಧಿಸಿ ತನ



ಹೆಸರನ್ನು ಸಾರ್ಥಕಪಡಿಸಿಕೊಳ್ಳಬೇಕೆಂದು ಸಾವಿತ್ರಿ ನಿಶ್ಚಯಿಸಿದಳು. ಅವಳು ರೂಪವತಿಯ ಹತ್ತಿರ ವಿಚಾರಿಸಿ ಆ ಗೊಲುಸು ಸರದ ರೂಪ ಆಕಾರ ಮುಂತಾದುವನ್ನು ತಿಳಿದುಕೊಂಡು, ಸಾಧ್ಯವಾದಷ್ಟು ಅದೇ ತರಹದ ಇನ್ನೊಂದು ಗೊಲುಸು ಸರವನ್ನು ಮಾಡಿಸಿಕೊಂಡಳು, ಆ ಮೇಲೆ ತನ್ನ ಸ್ವಂತ ದೋಣಿಯಲ್ಲಿ ಪ್ರಯಾಣ ಮಾಡಿ ದೇವಗಿರಿಯನ್ನು ತಲಪಿದಳು. ಅಲ್ಲಿ ಅರಮನೆಯ ವಾರ್ತೆ ಏನೆಂಬುದನ್ನು ಉಪಾಯವಾಗಿ ವಿಚಾರಿಸಿ ತಿಳಿದುಕೊಂಡಳು, ವಿಶೇಷವೇನೆಂದರೆ, ಕಾಳಿಂದಿಗೆ ಅಂಗಾಲಿನಲ್ಲಿ ಏನೋ ಹುಣ್ಣು ಬಂದಿದ್ದು, ರಾಜವೈದ್ಯರಿಂದ ಕೂಡಾ ಅದನ್ನು ಗುಣಪಡಿಸಲು ಸಾಧ್ಯವಾಗಿಲ್ಲವಂತೆ.

ಈಗ ಅರಮನೆಯೊಳಗೆ ಕಾಳಿಂದಿಗೆ ಹಿತ ಚಿಂತಕರಾಗಿ ಯಾರೂ ಇಲ್ಲವೆಂದೂ ಗೊತ್ತಾಯಿತು. ಅವಳ ಅಂಗಾಲಿನ ವ್ರಣವು ರಾಜವೈದ್ಯನಿಂದ ಗುಣವಾಗದೆ, ಇನ್ನಷ್ಟು ಜೋರಾಗಿ ತತ್ತಳಿಸುತ್ತಿದ್ದಾಳಂತೆ!

ಇದನ್ನೆಲ್ಲ ತಿಳಿದು ಸಾವಿತ್ರಿ ತನ್ನ ಕೆಲಸವನ್ನು ನಿರ್ಧರಿಸಿಕೊಂಡು, ಯಾವುದೋ ಒಂದು ಲೇಪನವನ್ನು ತಯಾರಿಸಿಕೊಂಡಳು. ಆಮೇಲೆ ತಾನು ಚರ್ಮ ರೋಗಗಳನ್ನು ಗುಣಪಡಿಸಬಲ್ಲೆನೆಂದೂ, ಎಂತಹ ವ್ರಣವಾದರೂ ಮೂರೇ ದಿನಗಳಲ್ಲಿ ಗುಣಪಡಿಸುವೆನೆಂದೂ ಅರಮನೆಯ ಹತ್ತಿರ ಅವರಿವರೊಂದಿಗೆ ಹೇಳಿದಳು. ಕಾಳಿಂದಿಯ ಕಿವಿಗೂ ಅವಳ ಸಂಗತಿ ಕೇಳಿಸಿತು. ಅವಳು ಕೂಡಲೇ ಸಾವಿತ್ರಿಯನ್ನು ತನ್ನ ಬಳಿಗೆ ಕರೆಯಿಸಿ, ತನ್ನ ಪಾದದ ಹುಣ್ಣನ್ನು ತೋರಿಸಿದಳು. ಸಾವಿತ್ರಿ ಆ ಪಾದವನ್ನು ಪರೀಕ್ಷಿಸಿ, "ಇದಕ್ಕಿಂತ ತೀವ್ರವಾದ ಹುಣ್ಣುಗಳನ್ನು ಮೂರು ದಿನಗಳಲ್ಲಿ ಗುಣ ಪಡಿಸಿದ್ದೇನೆ. ಹುಣ್ಣಿನ ಮಚ್ಚೆ ಕೂಡಾ ಕಾಣಲಾರದು" ಎಂದಳು.

"ನನ್ನ ವ್ರಣ ಗುಣಪಡಿಸಿದರೆ ನೀನು ಏನು ಕೇಳಿದರೂ ಕೊಡುತ್ತೇನೆ" ಎಂದಳು ಕಾಳಿಂದಿ. ಸಾವಿತ್ರಿ ಕಾಳಿಂದಿಯ ಕೊರಳಿನಲ್ಲಿರುವ ಗೊಲುಸು ಸರವನ್ನು ಅಡ್ಡ ಗಣ್ಣಿನಿಂದ ಗಮನಿಸಿದಳು. ರೂಪವತಿ ವರ್ಣಿಸಿದ ಯೋಗಿಯ ಗೊಲುಸು ಸರ ಅದೇ ಎಂದು ಗೊತ್ತಾಯಿತು. ಸಾವಿತ್ರಿ ಮಾಡಿಸಿಟ್ಟುಕೊಂಡಿರುವ ಗೊಲುಸು ಸರಕ್ಕೂ ಇದಕ್ಕೂ ಅಷ್ಟೇನೂ ವ್ಯತ್ಯಾಸವಿರಲಿಲ್ಲ.

ಸಾವಿತ್ರಿ ಕಾಳಿಂದಿಯ ಕೈಗಳಲ್ಲಿದ್ದ ಕಂಕಣಗಳನ್ನು ತೋರಿಸಿ, "ದೇವೀ, ನನ್ನ ಔಷಧ ಕೆಲಸ ಮಾಡಬೇಕಾದರೆ, ತಮ್ಮ ಶರೀರದ ಮೇಲೆ ಬಂಗಾರವೇ ಇರಬಾರದು. ಆ ಕಂಕಣಗಳನ್ನೂ, ಉಂಗುರಗಳನ್ನೂ ಎಲ್ಲಾ ತೆಗೆದು ಬಿಡಿರಿ" ಎಂದಳು.

ಕಾಳಿಂದಿ ಅವುಗಳನ್ನೆಲ್ಲ ತೆಗೆದು, ತನ್ನ ದಾಸಿಯ ಕೈಗೆ ಕೊಟ್ಟಳು. ಆದರೆ ಕೊರಳಲ್ಲಿದ್ದ ಗೊಲುಸು ಸರವನ್ನು ತೆಗೆಯಲಿಲ್ಲ. ಅದು ಗೊತ್ತಾಗದವಳಂತೆ ಸಾವಿತ್ರಿ ಹುಣ್ಣಿಗೆ ಲೇಪನವನ್ನು ಪೂಸಿ, ನಾಳೆ ಬರುತ್ತೇನೆಂದು ಹೇಳಿ ಹೊರಟು ಹೋದಳು.

ಮರುದಿನ ಸಾವಿತ್ರಿ ಬಂದಾಗ ಕಾಳಿಂದಿ, "ನಿನ್ನ ಔಷಧದ ಲೇಪ ಏನೂ ಕೆಲಸ ಮಾಡಿದಂತೆ ಕಾಣುವುದಿಲ್ಲ. ಹುಣ್ಣು ಇದ್ದ ಹಾಗೇ ಇದೆ." ಎಂದಳು.

ಸಾವಿತ್ರಿ ಆಶ್ಚರ್ಯದಿಂದ ಅವಳನ್ನು ನೋಡಿ, "ಕುತ್ತಿಗೆಯಲ್ಲಿ ಅದೇನು ?" ಎಂದು ಹತ್ತಿರ ಬಂದು ಆ ಗೊಲುಸು ಸರವನ್ನು ತಾನೇ ತೆಗೆಯುತ್ತ, "ಈ ಬಂಗಾರವು ಶರೀರದ ಮೇಲಿದ್ದರೆ ನನ್ನ ಮದ್ದು ಹೇಗೆ ಕೆಲಸ ಮಾಡೀತು ?" ಎಂದು ತನ್ನ ಚೀಲದೊಳಗಿನಿಂದ ಒಂದು ಕಾಗದದ ಲಕೋಟೆಯನ್ನು ತೆಗೆದು ಗೊಲುಸು ಸರವನ್ನು ಅದರೊಳಗೆ ಹಾಕಿ, ಕಾಗದದ ಬಾಯಿಯನ್ನು ದಾರದಿಂದ ಕಟ್ಟಿ ತನ್ನ ಬಳಿಯಲ್ಲಿಟ್ಟು ಕೊಂಡಳು.

ಅವಳ ಈ ಕೆಲಸ ಕಾಳಿಂದಿಗೆ ಹಿಡಿಸಲಿಲ್ಲ. ಅವಳು ತನ್ನ ಪಾದಕ್ಕೆ ಲೇಪನ ಹಚ್ಚುವಾಗ ಅವಳು ಆ ಕಾಗದದ ಲಕೋಟೆಯನ್ನೇ ನೋಡುತ್ತಿದ್ದಳು.

ಸಾವಿತ್ರಿ ಮದ್ದು ಹಚ್ಚಿ ತನ್ನ ಬೆರಳನ್ನು ಒರೆಸಿಕೊಂಡು, ಆ ಕಾಗದದ ಲಕೋಟೆಯನ್ನು ತನ್ನ ಚೀಲದೊಳಗೆ ಇಳಿಸಿಕೊಳ್ಳುತ್ತ, "ಇನ್ನು ನೋಡಿರಮ್ಮಾ, ನನ್ನ ಔಷಧದ ಮಹತ್ವ ಹೇಗಾಗುತ್ತೇ ಅಂತ!" ಎಂದಳು.

"ಇದೇನೇ ? ನನ್ನ ಗೊಲುಸು ಸರ ನಿನ್ನ ಚೀಲದೊಳಗೆ ಹಾಕ್ಕೊಂಡಿಯಲ್ಲಾ ?" ಎಂದಳು ಕಾಳಿಂದಿ.

"ಓ! ಮರೆತೆ! ಆದರೂ ಆ ಸಣ್ಣ ಬಹುಮಾನಕ್ಕೆ ನಾನು ತಕ್ಕವಳಲ್ಲವೆಂದುಕೊಂಡಿರಾ?" ಎನ್ನುತ್ತ ಸಾವಿತ್ರಿ ಆ ಲಕೋಟೆಯನ್ನು ತೆಗೆಯಲು ಚೀಲದೊಳಗೆ ಕೈ ಹಾಕಿಕೊಂಡಳು.

"ಹುಣ್ಣು ಗುಣವಾದ ಮೇಲೆ ಇದಕ್ಕಿಂತ ಹತ್ತು ಪಾಲು ಹೆಚ್ಚಿನ ಬಹುಮಾನ ಕೊಡುತ್ತೇನೆ ಗೊತ್ತಾ? ಅದನ್ನಿತ್ತ ಕೊಟ್ಟು ಬಿಡು." ಎಂದಳು ಕಾಳಿಂದಿ.

"ನಿಮಗೆ ನನ್ನ ಚಿಕಿತ್ಸೆಯಲ್ಲಿ ನಂಬುಗೆ ಇಲ್ಲ ಬಿಡಿ. ನಿಜವೇ, ಗುಣವಾಗದೆ ಮೊದಲೇ ಹೇಗೆ ನಂಬುಗೆ



ಬಂದೀತು?" ಎನ್ನುತ್ತ ಸಾವಿತ್ರಿ ಲಕೋಟೆಯ ದಾರದ ಕಟ್ಟನ್ನು ಬಿಚ್ಚಲು ನೋಡಿ, ಅದು ಸುಲಭದಲ್ಲಿ ಬಾರದ ಗಂಟಾಗಿರಲು, ರೋಸಿಕೊಂಡಂತೆ ನಟಿಸುತ್ತ ಕಾಗದದ ಅಡಿ ಭಾಗದಲ್ಲಿ ಹರಿದು ಗೊಲುಸು ಸರ ಕೆಳಗೆ ಬೀಳುವಂತೆ ಮಾಡಿದಳು.

"ನೀವು ಲೇಪ ಒಣಗುವ ವರೆಗೆ ಅಲುಗಾಡಬಾರದಮ್ಮ" ಎನ್ನುತ್ತ ಆ ಗೊಲುಸು ಸರವನ್ನು ದಾಸಿಯ ಕೈಗೆ ಕೊಟ್ಟು, ಕೆಳಗೆ ಬಿದ್ದ ಕಾಗದ ಚೂರುಗಳನ್ನು ಹೆಕ್ಕಿ ತನ್ನ ಚೀಲದಲ್ಲಿಟ್ಟುಕೊಂಡು, "ಹೋಗಿಬರುತ್ತೇನಮ್ಮ, ನಾಳೇ ನೀವೇ ನನ್ನನ್ನು ಹೊಗಳುವಿರಿ." ಎಂದು ಅಲ್ಲಿಂದ ಹೊರಟು, ಬೇಗಬೇಗನೆ ರುದ್ರಪುರವನ್ನು ಸೇರಿದಳು.

ಸಾವಿತ್ರಿಗೆ ಯಾವ ಕೆಲಸವಾಗಬೇಕಿತ್ತೋ ಆ ಕೆಲಸ ಆಗಿಹೋಗಿತ್ತು. ಗೋಲಾಪನ ಪ್ರಾಣ ಉಳಿಸುವ ಗೊಲುಸು ಸರ ಅವಳ ಕೈಗೆ ಸಿಕ್ಕಿತ್ತು. ಅವಳು ಕಾಳಿಂದಿಗೆ ಹಿಂದಿರುಗಿ ಕೊಟ್ಟದ್ದು ನಕಲು ಗೊಲುಸು

ಸರ. ಸಾವಿತ್ರಿಯು ಹತ್ತಿರವಿದ್ದ ಕಾಗದದ ಲಕೋಟೆಯೊಳಗೆ ಇನ್ನೊಂದು ಕಾಗದದ ಲಕೋಟೆ ಇದ್ದಿತು. ಎರಡು ಲಕೋಟೆಗಳ ಬಾಯಿಗಳೂ ಸೇರಿಕೊಂಡಿದ್ದುದರಿಂದ ಕಾಳಿಂದಿಯಿಂದ ತೆಗೆದುಕೊಂಡ ಗೊಲುಸು ಸರ ಒಳಗಿನ ಲಕೋಟೆಗೆ ಬಿದ್ದಿತ್ತು. ಅದರ ಕೆಳಗಿನ ಲಕೋಟೆಯಲ್ಲಿ ಈ ಮೊದಲೇ ತಯಾರಿಸಿದ್ದ ನಕಲು ಗೊಲುಸು ಸರವಿದ್ದಿತು. ಲಕೋಟೆಯ ಅಡಿ ಭಾಗವನ್ನು ಹರಿದಾಗ ಆ ನಕಲು ಗೊಲುಸು ಸರ ಹೊರಗೆ ಬಿತ್ತು. ಅದನ್ನು ಕಾಳಿಂದಿಯ ಕೈಗೇ ಕೊಟ್ಟರೆ ತನ್ನ ಮೋಸವನ್ನು ಕಂಡುಹಿಡಿಯುವಳೆಂಬ ಭಯದಿಂದ ಸಾವಿತ್ರಿ ಅದನ್ನು ದಾಸಿಯ ಕೈಗೆ ಕೊಟ್ಟಳು. ಕೂಡಲೇ ಕಾಳಿಂದಿ ದಾಸಿಯ ಕೈಯಿಂದ ಗೊಲುಸು ಸರವನ್ನು ತನ್ನ ಕೈಗೆ ತೆಗೆದುಕೊಳ್ಳಲಾಗದಂತೆ ಅಲುಗಾಡಬಾರದೆಂದು ಬೇರೆ ಹೇಳಿದ್ದಳಷ್ಟೆ? ಶರೀರದ ಮೇಲೆ ಬಂಗಾರವಿದ್ದರೆ ವ್ರಣ ವಾಸಿಯಾಗುವುದಿಲ್ಲವೆಂದೂ ಹೆದರಿಸಿದ್ದುದರಿಂದ, ದಾಸಿಯೇ ಆವಳ ಆಭರಣಗಳನ್ನು ಭದ್ರಪಡಿಸುವಳೆಂದೂ ಸಾವಿತ್ರಿ ಧೈರ್ಯವಾಗಿ ಕೆಲಸ ಸಾಧಿಸಿದಳು.

ಸಾವಿತ್ರಿ ಮನೆಗೆ ಹೋಗಿ ತನ್ನ ವಿಜಯವನ್ನು ಯಾರಿಗೂ ಹೇಳದೆ, ತನ್ನನ್ನು ಗೋಲಾಪನ ಶರೀರದೊಂದಿಗೆ ವಿವಾಹ ಮಾಡುವಂತೆ ತಂದೆಯೊಡನೆ ಹೇಳಿದಳು. ತಂದೆ ಅವಳ ಮಾತಿಗೆ ಮೊದಲು ಒಪ್ಪಲಿಲ್ಲ. ಮೊದಲು ಗೋಲಾಪನು ಬದುಕಲಿ. ಆಮೇಲೆ ಮದುವೆ ಮಾಡೋಣವೆಂದನು.

"ಮೊದಲು ಆತನ ಕಳೇಬರದೊಂದಿಗೆ ಮದುವೆಯಾದರೆ, ನನ್ನ ಪಾತಿವ್ರತ್ಯ ಮಹಿಮೆಯಿಂದ ಅವನು ಬದುಕುವನು" ಎಂದಳು ಸಾವಿತ್ರಿ.

ಕಡೆಗೆ ಸಾವಿತ್ರಿಯನ್ನು ನಿರ್ಜೀವನಾದ ಗೋಲಾಪನೊಂದಿಗೆ ಮದುವೆ ಮಾಡಿದರು. ಮದುವೆಯಲ್ಲಿ ಸಾವಿತ್ರಿ ತನ್ನ ಸೋದರತ್ತೆ ರೂಪವತಿಯಿಂದ ಮಾಂಗಲ್ಯವನ್ನು ಕಟ್ಟಿಸಿಕೊಂಡು, ತಾನು ತಂದ ಗೊಲುಸು ಸರವನ್ನು ಗೋಲಾಪನ ಕೊರಳಿಗೆ ಕಟ್ಟಿದಳು. ಆ ಕೂಡಲೇ ಗೋಲಾಪನು ನಿದ್ದೆಯಿಂದೆದ್ದವನಂತೆ ಎದ್ದು ಕುಳಿತನು.

ಅನಂತರ ಕೆಲವು ದಿನಗಳಲ್ಲಿ ಗೋಲಾಪನು ತಾಯಿಯನ್ನೂ, ಹೆಂಡತಿಯನ್ನೂ ಕರೆದುಕೊಂಡು, ಅಕಸ್ಮಾತ್ತಾಗಿ ದೇವಗಿರಿಗೆ ಬಂದು ಎಲ್ಲರನ್ನೂ ಆಶ್ಚರ್ಯಪಡಿಸಿದನು. ಸಾವಿತ್ರಿ ತನ್ನ ಕಣ್ಣುಗಳನ್ನು ತಾನೇ ನಂಬಲಾರದೆ ಹೋದಳು. ಆದರೆ ಅವಳು ಸಾವಿತ್ರಿಯ ಗುರುತು ಹಿಡಿದು ಮತ್ತೇನಾದರೂ ರಂಪ ಮಾಡುವುದಕ್ಕೆ ಮೊದಲೇ, ಹೊಸ ರಾಜನಾದ ಗೋಲಾಪನು ಅವಳಿಗೆ ಆಜನ್ಮ ಕಾರಾಗೃಹ ಶಿಕ್ಷೆ ವಿಧಿಸಿ ಸೆರೆ ಮನೆಗೆ ಸೇರಿಸಿಬಿಟ್ಟನು. ವಿವಾಹದ ವೈಭವ ವಿಧಿಗಳು ಆ ಮೇಲೆ ನಡೆದುವು.





# ಬಾಯುಪಚಾರ

ಶ್ರೀನಿವಾಸಪುರದಲ್ಲಿ ಕಸ್ತೂರಿರಂಗಯ್ಯನವರು ದೊಡ್ಡ ಧನಿಕರು. ಊರೊಳಗಿನ ಎಲ್ಲರೂ ಅವರ ಕೈಯಿಂದ ಸ್ವಲ್ಪವೋ ತುಂಬವೋ ಸಾಲ ಪಡೆದವರೇ. ಆದುದರಿಂದ ಯಾರೂ ಅವರನ್ನು ದೂರಿ ಮಾತಾಡುತ್ತಿದ್ದಿಲ್ಲ. ಮನಸ್ಸಿನೊಳಗೇ ದೂರಿಕೊಳ್ಳುತ್ತಿದ್ದರೆ ಅದರಿಂದ ಅವರಿಗೇನೂ ಆಗುವುದಿಲ್ಲವಷ್ಟೆ? ಹಾಗೆ ದೂರಿಕೊಳ್ಳುವಂತಹ ಅವರಲ್ಲಿರುವ ಗುಣವಿಶೇಷವೇನೆಂದರೆ, ಅವರು ಪರಮಲೋಭಿಯಾಗಿದ್ದು ಕೂಡಾ ಮಹಾ ಉದಾರಿಗಳಂತೆ ನಟಿಸುತ್ತಿದ್ದರು.

ಇಂತಿರುವ ಗ್ರಾಮಕ್ಕೆ ಒಬ್ಬ ಹರಿದಾಸನು ದಯಮಾಡಿಸಿದನು. ಕಸ್ತೂರಿರಂಗಯ್ಯನವರ ದೊಡ್ಡತನವನ್ನು ಕೇಳಿ ಅವರ ಬಳಿಗೆ ಬಂದು, ತನ್ನಿಂದ ಒಂದು ಹರಿಕಥೆಗೆ ಏರ್ಪಾಡು ಮಾಡಿಸಬೇಕೆಂದು ಪ್ರಾರ್ಥಿಸಿಕೊಂಡನು. ಅವನ ಪ್ರಾರ್ಥನೆಯನ್ನು ಅವರು ಕೇಳಲಿಕ್ಕೆ ಅವನು ಎರಡು ದಿನ ಸುತ್ತಬೇಕಾಯಿತು. ಕೇಳಿದ ಮೇಲೆ ತಮ್ಮ ಅಮೂಲ್ಯ ಪ್ರತ್ಯುತ್ತರವನ್ನು ನೀಡಲು ಮತ್ತೆರಡು ದಿನ ಪ್ರದಕ್ಷಿಣೆ ಬರಿಸಿದರು. ಈ ನಾಲ್ಕು ದಿನಗಳಲ್ಲಿ ಆ ಹರಿದಾಸನು ಪಕ್ಕದ ಊರಿನಲ್ಲಿ ಸಂಪಾದಿಸಿಕೊಂಡು ಬಂದ ಸ್ವಲ್ಪ ಹಣವೂ ಖರ್ಚಾಗಿಹೋಯಿತು. ಅದನ್ನು ಹೇಳಿಕೊಂಡು ಅವನು ತನಗೆ "ಸ್ವಯಂಪಾಕಕ್ಕೆ" ಪದಾರ್ಥಗಳನ್ನು ಕೊಡಿಸಬೇಕೆಂದು ಕೇಳಿಕೊಂಡನು.

ಅದೇ ಸಮಯಕ್ಕೆ ನಾಗಶೆಟ್ಟಿ ಎಂಬ ದೊಡ್ಡ ಮನುಷ್ಯರು ಕಸ್ತೂರಿರಂಗಯ್ಯನ ಬಳಿಗೆ ಏನೋ ಸಾಲ ಕೇಳಲು ಬಂದರು. ಕಸ್ತೂರಿರಂಗಯ್ಯ ನಾಗಶೆಟ್ಟರಿಗೆ ಹರಿದಾಸನನ್ನು ತೋರಿಸಿ, "ಇವರು ಹರಿದಾಸರಂತೆ. ಹರಿಕಥೆಗೆ ಏರ್ಪಾಡು ಮಾಡಬೇಕೆಂದು ಕೇಳುತ್ತಿದ್ದಾರೆ. ನನಗೆ ಈಗ ಬಿಡುವೇ ಇಲ್ಲ. ನೀವೇನೂ ವ್ಯತ್ಯಾಸವಾಗಿ ತಿಳಿಯಬಾರದು. ಇವರಿಗೆ ಸಹಾಯ ಮಾಡಿಬಿಡಿ" ಎಂದರು. ಆಗಲೆಂಬಂತೆ ನಾಗಶೆಟ್ಟರು ತಲೆಯಾಡಿಸಿದರು.

"ಅಂದಹಾಗೆ ಹರಿದಾಸರ ಹತ್ತಿರ ಚಿಕ್ಕಾಸು ಕೂಡಾ ಇಲ್ಲವಂತೆ. ಈ ದಿನದ ಅವರ ಸ್ವಯಂಪಾಕದ ಪುಣ್ಯ ನಿಮ್ಮದಾಗಲಿ!" ಎಂದರು ಕಸ್ತೂರಿರಂಗಯ್ಯ, ಶೆಟ್ಟರು ಕೇಳಿದ ಸಾಲದ ಹಣವನ್ನು ಕೊಡುತ್ತಾ.

ನಾಗಶೆಟ್ಟರು ಹರಿದಾಸನನ್ನು ತನ್ನೊಂದಿಗೆ ಕರೆದುಕೊಂಡು, ಅಕ್ಕಿ ಬೇಳೆ ತರಕಾರಿ ಪಾತ್ರೆ ಮುಂತಾದ ಸ್ವಯಂಪಾಕಕ್ಕೆ ಬೇಕಾದುವನ್ನು ಕೊಟ್ಟು ಆದರಿಸಿ

ವಿ. ವ್ಯಾ. ರಾಮು



ದರು. ಆ ದಿನ ರಾತ್ರಿ ಊರ ದೇವಾಲಯದ ಪಟಾಂಗಣದಲ್ಲಿ ಹರಿಕಥೆಗೂ ಏರ್ಪಾಡು ಮಾಡಿಸಿದರು. ಕೇಳಲು ಎಲ್ಲರೂ ಬಂದರು. ಕಸ್ತೂರಿ ರಂಗಯ್ಯನಂತಹ ಪ್ರಮುಖರು ಕೂಡಾ ಬಂದು ತಮಗಾಗಿ ಏರ್ಪಡಿಸಿದ ಕುರ್ಚಿಗಳಲ್ಲಿ ಕುಳಿತರು.

ಹರಿದಾಸನು ಕಥೆ ಪ್ರಾರಂಭಿಸುವುದಕ್ಕೆ ಮೊದಲು. "ನಾನು ಈ ಊರಿಗೆ ಬರಲು ಮೂಲ ಕಾರಣವೇ ಕಸ್ತೂರಿರಂಗಯನವರ ದಿವ್ಯ ಕೀರ್ತಿ ! ಅವರ ಕೀರ್ತಿ ಚಂದ್ರಿಕೆ ದಿಗಂತದೊಳಗೆಲ್ಲಾ ವ್ಯಾಪಿಸಿದೆ. ಅವರು ಯಾಚಕರ ಪಾಲಿನ ಕಲ್ಪವೃಕ್ಷವೆಂಬ ಸಂಗತಿ ಅವರೊಂದಿಗೆ ಮಾತಾಡಿದ ಮೇಲೆ ನನಗೆ ಗೊತ್ತಾಯಿತು. ಹುಣ್ಣಿಮೆಯ ಚಂದ್ರನಲ್ಲಿ ಮಚ್ಚೆಯೊಂದಿರುವುದಾದರೂ ಅವರ ಮುಖ ಚಂದ್ರದಲ್ಲಿ ಯಾವ ಕಳಂಕವೂ ಇಲ್ಲ. ಉತ್ತಮ ಸಂಸ್ಕಾರಿಯ ಹೆಸರು ಹೇಳಬೇಕಾದರೆ, ಮೊದಲು ಅವರ ಹೆಸರು ಹೇಳಬೇಕು. ಅವರು ತ್ಯಾಗದಲ್ಲಿ ಶಿಬಿಯನ್ನೂ ದಿಲೀಪನನ್ನೂ ಮೀರಿಸುವರೆಂದರೆ ಅತಿಶಯೋಕ್ತಿಯಲ್ಲ. ಅವರೊಂದಿಗೆ ಪ್ರಥಮ ಪರಿಚಯವಾದುದು ನನ್ನ ಭಾಗ್ಯ ವಿಶೇಷವೇ !" ಎಂದನು.

ಈ ಹೊಗಳಿಕೆಯಿಂದ ಕಸ್ತೂರಿರಂಗಯ್ಯ ಉಬ್ಬಿದರು. ಮುಖದಲ್ಲಿ ಗರ್ವದ ಕಳೆ ಮೂಡಿಕೊಂಡಿತು,

ಆಮೇಲೆ ಹರಿ ಕಥೆ ಚೆಂದಾಗಿ ನಡೆದು ಮುಗಿಯಿತು. ಎಲ್ಲರೂ ಅವರವರ ಮನೆಗೆ ಹೊರಟುಹೋಗುವಾಗ, ಕಸ್ತೂರಿರಂಗಯ್ಯನೂ ತನ್ನ ಮನೆಗೆ ಹಿಂದಿರುಗುತ್ತ, "ಹರಿದಾಸನು ನನ್ನನ್ನು ಹಾಗೆ ಹೊಗಳಿದ್ದರಲ್ಲಿ ಏನಾದರೂ ಅಂತರಾರ್ಥ ವಿದ್ದೀತು," ಎಂದುಕೊಂಡರು.

ಮರುದಿನ ಹರಿದಾಸನು ಅವರ ಮನೆಗೆ ಬಂದು. ಅವರಿಂದ ಸಂಭಾವನೆಯನ್ನು ಕೇಳಿದನು. ಕಸ್ತೂರಿ ರಂಗಯ್ಯನವರು ಒಂದು ಕಾಗದದಲ್ಲಿ ತಮ್ಮ ಹೆಸರನ್ನು ಬರೆದು. ಅದನ್ನು ಹರಿದಾಸನಿಗೆ ಕೊಡುತ್ತ, "ಈ ಊರಲ್ಲಿ ಇನ್ನೂ ಅನೇಕರು ಸಂಭಾವನೆ ಕೊಡುವವರಿದ್ದಾರೆ. ಅವರಿಂದೆಲ್ಲಾ ವಸೂಲು ಮಾಡಿಕೊಂಡು ಬನ್ನಿ. ಆಮೇಲೆ ನಾನು ಕೊಡುತ್ತೇನೆ. ಈಗ ನನ್ನ ಗುಮಾಸ್ತ ಇಲ್ಲ" ಎಂದರು.

ಹರಿದಾಸನು ಊರೊಳಗೆ ತಿರುಗಾಡಿ ಹತ್ತು ಮಂದಿಗಳಿಂದ ಸಂಭಾವನೆ ವಸೂಲು ಮಾಡಿಕೊಂಡು, ಸಾಯಂಕಾಲದಲ್ಲಿ ಕಸ್ತೂರಿರಂಗಯ್ಯನನ್ನು ಬಂದು ನೋಡಿದನು. ಅವರು ಅವನೊಂದಿಗೆ ಊರೊಳಗಿನವರ ಎಷ್ಟೋ ಸಂಗತಿಗಳನ್ನು ಮಾತಾಡಿದರೇ ಹೊರತು ತನ್ನ ಸಂಭಾವನೆಯ ಮಾತು ತೆಗೆಯಲೇ ಇಲ್ಲ. ಕಡೆಗೆ ಹರಿದಾಸನು ಹೋಗಿಬರುತ್ತೇನೆನ್ನಲು, ಸರಿಸರಿಯೆನ್ನುತ್ತಾ ಎದ್ದು ಒಳಗೆ ಹೋಗಿಬಿಟ್ಟರು.

ಮರುದಿನ ಹರಿದಾಸನು ಕಸ್ತೂರಿರಂಗಯ್ಯನ ಮನೆಗೆ ಹೋದಾಗ ಅವರು ಮನೆಯಲ್ಲಿರಲಿಲ್ಲ. ಇನ್ನೊಂದುಸಾರಿ ಪೂಜೆಯಲ್ಲಿರುವರೆಂದೂ. ಮೂರನೇ ಸಾರಿ ನಿದ್ರೆಯಲ್ಲಿರುವರೆಂದೂ ಆಳು ಹೇಳಿದನು.

ನಾಲ್ಕನೇದಿನ ಹರಿದಾಸನು ಹೋದಾಗ ಕಸ್ತೂರಿ ರಂಗಯ್ಯ ಯಾರೊಂದಿಗೋ ಮಾತಾಡುತ್ತಿದ್ದರು. ಹರಿದಾಸನು ಬಹಳ ಹೊತ್ತು ಕಾದು ನೋಡಿ, "ನಾನು ನಾಳೆ ಊರಿಗೆ ಹೋಗುತ್ತೇನೆ ಸ್ವಾಮಿ. ತಮ್ಮ ಸಂಭಾವನೆ ದಯ ಮಾಡಿಸಿಬಿಡಿ" ಎಂದನು.

"ಅದೇನು? ಗುಮಾಸ್ತ ಕೊಡಲಿಲ್ಲವೇನು? ಕೊಟ್ಟುಬಿಡು ಅಂತ ಮೊನ್ನೆಯೇ ಹೇಳಿದೆನಲ್ಲ? ಸರಿ. ಇವತ್ತು ಅವನು ಊರಲಿಲ್ಲ, ನಾಳೆ ಬನ್ನಿ" ಎಂದರು ಕಸ್ತೂರಿರಂಗಯ್ಯ.

ಹರಿದಾಸನು ಉಸ್ಸೆನ್ನುತ್ತಾ ಹಿಂದಿರುಗಿ, ಮಾರಣೇ ದಿನ ಗುಮಾಸ್ತನು ಬಂದಿರುವನೆಂದು ತಿಳಿದು, ಅವನನ್ನು ನೋಡಲು ಹೋದನು. ಗುಮಾಸ್ತ ಹರಿದಾಸನನ್ನು ನೋಡಿ "ಏನು ಹೀಗೆ ಬಂದಿರಲ್ಲಾ" ಎಂದು ಕೇಳಿದನು.

ಹರಿದಾಸ ಹೇಳಿದುದನ್ನು ಕೇಳಿ ಗುಮಾಸ್ತನು, "ಹರಿದಾಸರೇ, ನಮ್ಮ ಯಜಮಾನರ ಅಭಿಪ್ರಾಯ ನಿಮಗೆ ಅರ್ಥವಾಗಿಲ್ಲ ಅಂತ ಕಾಣುತ್ತದೆ. ತಮ್ಮ ಸಂಭಾವನೆ ಕೈ ಮುಟ್ಟ ಬರೆದುಕೊಟ್ಟರಷ್ಟೇ? ಅದೇ ಅವರ ಔದಾರ್ಯ. ಅದನ್ನು ನೋಡಿ, ಅವರನ್ನು ನೆನೆಯುತ್ತ ಬೇರೆಯವರು ಕೊಡುವುದೇ ತಾವು ಕೊಡುವ ಸಂಭಾವನೆಯೆಂಬುದು ಅವರ ಅಭಿಪ್ರಾಯ! ಆದುದರಿಂದ ಇನ್ನೇನೂ ಅವರ ಸಂಭಾವನೆಯ ಆಶೆ ಇಟ್ಟುಕೊಳ್ಳಬೇಡಿ" ಎಂದನು. ಈಗ ಹರಿದಾಸನಿಗೆ ಎಲ್ಲಾ ಅರ್ಥವಾಯಿತು. ಆ ದಿನ ಸಾಯಂಕಾಲ ಕಸ್ತೂರಿರಂಗಯ್ಯ ಹತ್ತಾರು ಮಂದಿಗಳೊಂದಿಗೆ ಮಾತಾಡಿಕೊಂಡಿದ್ದಾಗ ಹರಿದಾಸನು ಬಂದು, "ಅಯ್ಯಾ, ನಾನು ಹೊರಟು ಹೋಗುತ್ತೇನೆ. ಅಪ್ಪಣೆ ಕೊಡಿ. ನೀವು ನನ್ನೊಂದಿಗೆ ಒಂದೇ ಒಂದು ಸುಳ್ಳು ಮಾತ್ರವೇ ಹೇಳಿದಿರಿ. ನಿಮ್ಮ ಸಂಭಾವನೆಯನ್ನು ನನಗೆ ಕೊಡಲು ನಿಮ್ಮ ಗುಮಾಸ್ತ ನೊಂದಿಗೆ ಹೇಳಿದ್ದೇನೆ ಎಂದಿರಲ್ಲಾ, ಅದೊಂದೇ ನೀವು ಹೇಳಿದ ಸುಳ್ಳು. ನಾನು ತುಂಬಾ ಸುಳ್ಳುಗಾರ. ನಿಮ್ಮನ್ನು ಕುರಿತು ಪ್ರಶಂಸಿಸಿ ತುಂಬಾ ಸುಳ್ಳು ಹೇಳಿಬಿಟ್ಟೆ. ಬಡವನಾದುದರಿಂದ ಹಾಗೆಲ್ಲಾ ಸುಳ್ಳಾಡಬೇಕಾಗಿ ಬಂತು. ಆದ್ದರಿಂದಲೇ ತಮಗೆ ನನ್ನ ಮೇಲೆ ಅನುಗ್ರಹ ಬರಲಿಲ್ಲ" ಎಂದನು.

ಹತ್ತು ಜನರ ನಡುವೆ ಕಸ್ತೂರಿರಂಗಯ್ಯನಿಗೆ ಮುಖ ಎತ್ತದಂತಾಯಿತು. ಅವರೆಲ್ಲಾ ಹರಿದಾಸನಿಗೆ ಸಂಭಾವನೆ ಕೊಟ್ಟವರೇ. ಕಸ್ತೂರಿರಂಗಯ್ಯ ಹೊರಟ ಹರಿದಾಸನನ್ನು ನಿಲ್ಲಿಸಿ ಗುಮಾಸ್ತನನ್ನು ಕರೆದು ಕೋಪಿಸಿಕೊಂಡಂತೆ ನಟಿಸಿ, ಇಪ್ಪತ್ತೈದು ರೂಪಾಯಿ ಕೊಡಿಸಿ ಕಳುಹಿಸಿದನು. ಕಡೆಗೂ ಒಬ್ಬನು ಕಸ್ತೂರಿ ರಂಗಯ್ಯನನ್ನು ಮೆಟ್ಟಿನಿಂದ ಹೊಡೆದನಲ್ಲಾ ಎಂದು ಊರವರಿಗೆ ಸಂತೋಷವಾಯಿತು.





# ಕೆಟ್ಟವನ ದೊಡ್ಡತನ

ಒಂದು ಊರಿನಲ್ಲಿ ಗೋಪಾಲಯ್ಯನೆಂಬ ಗೃಹಸ್ಥನಿದ್ದನು. ಆತನ ಮಗ ಗೋವಿಂದಯ್ಯನಿಗೆ ಇಪ್ಪತ್ತು ವರ್ಷ ಪ್ರಾಯ ಮೀರುತ್ತಿದ್ದರೂ ಬುದ್ಧಿ ಮಾತ್ರ ಸ್ವಲ್ಪವೂ ಬೆಳೆಯಲಿಲ್ಲ. ಅವನಿಂದ ಒಂದೇ ಒಂದು ಒಳ್ಳೆಯ ಕೆಲಸವೂ ಆಗಿರಲಿಲ್ಲ. ಅವನನ್ನು ಹೇಗೆ ಸರಿ ಮಾಡಬೇಕೆಂದು ತಿಳಿಯದೆ ಗೋಪಾಲಯ್ಯ ತಳಮಳಿಸಿಕೊಂಡಿದ್ದನು.

ಆ ಸಮಯದಲ್ಲಿ ಆ ಗ್ರಾಮಕ್ಕೆ ಚಿರಂಜೀವಿ ಎಂಬವನು ಬಂದನು. ಅವನು ಎಂತಹ ಮೊಂಡರನ್ನೂ, ಭಂಡರನ್ನೂ ಒಳ್ಳೆಯ ಬುದ್ಧಿವಂತರನ್ನಾಗಿ ಮಾಡಬಲ್ಲವನೆಂದು ಎಲ್ಲರೂ ಹೇಳಿಕೊಳ್ಳುತ್ತಿದ್ದರು. ಗೋಪಾಲಯ್ಯ ಆ ಮಹನೀಯನನ್ನು ತನ್ನ ಮನೆಗೆ ಆಹ್ವಾನಿಸಿ, ತನ್ನ ಮಗನ ಸಂಗತಿಯನ್ನು ಅವನೊಂದಿಗೆ ಹೇಳಿದನು. ತಾನು ಎಷ್ಟು ಚಿಂತೆಯಲ್ಲಿರುವೆನೆಂಬುದನ್ನೂ ಅವನಿಗೆ ಅರ್ಥವಾಗುವಂತೆ ಹೇಳಿದನು.

ಅದನ್ನು ಕೇಳಿ ಚಿರಂಜೀವಿ, "ನಿಮ್ಮ ಮಗನನ್ನು ನನ್ನ ಬಳಿಗೆ ಕರೆಯಿರಿ" ಎಂದನು. ಅದರಂತೆ ಅಲ್ಲಿಗೆ ಬಂದ ಗೋವಿಂದಯ್ಯನನ್ನು ಚಿರಂಜೀವಿ ಕೆಲವು ಕ್ಷಣ ತೀಕ್ಷ್ಣವಾಗಿ ನೋಡಿ, "ಗೋಪಾಲಯ್ಯಾ, ನೀವು ವ್ಯರ್ಥವಾಗಿ ಇವನ ವಿಷಯವಾಗಿ ಚಿಂತಿಸುತ್ತಿದ್ದೀರಿ. ನಿಮ್ಮ ಮಗ ಕೆಟ್ಟ ಕೆಲಸ ಮಾಡುತ್ತಿದ್ದರೇನಾಯಿತು? ಒಳ್ಳೆಯ ಕೆಲಸಕ್ಕಿಂತಲೂ ಕೆಟ್ಟ ಕೆಲಸವೇ ಬಹಳ ಕಷ್ಟ. ಕಷ್ಟವಾದ ಕೆಲಸ ಮಾಡುವವನು ಎಂದಿಗಾದರೂ ಒಳ್ಳೆಯ ಸ್ಥಿತಿಗೆ ಬರುತ್ತಾನೆ" ಎಂದನು.

ಗೋವಿಂದಯ್ಯ ತಂದೆಯ ಕಡೆಗೆ ನೀರಸವಾಗಿ ನೋಡಿ, ಅದೊಂದು ವಿಧವಾಗಿ ನಕ್ಕು ಅಲ್ಲಿಂದ ಹೊರಟು ಹೋದನು.

ಗೋಪಾಲಯ್ಯ ನಿರಾಶೆಯಿಂದ ಚಿರಂಜೀವಿಯನ್ನು ನೋಡಿ, "ನೀವೇನೋ ನಮ್ಮ ಹುಡುಗನನ್ನು ಸರಿ ದಾರಿಗೆ ತರುವಿರೆಂದು ನಂಬಿದರೆ, ಹೀಗೆ ಹೇಳಿಬಿಟ್ಟಿರಲ್ಲ? ಅವನು ಇನ್ನೇನು ಒಳ್ಳೆಯ ದಾರಿಗೆ ಬಂದಾನು?" ಎಂದನು.

"ಹಾಗಾದರೆ ನೀವು ನನ್ನ ಮಾತುಗಳನ್ನು ನಂಬುವುದಿಲ್ಲವೆಂದಾಯಿತು." ಎಂದ ಚಿರಂಜೀವಿ ತುಸು ಬೇಸರದಿಂದ.

"ಮತ್ತೇನ್ರೀ? ನಿಮ್ಮಂಥ ದೊಡ್ಡವರು ಹೇಳತಕ್ಕ ಮಾತೇ ಇದು? ಒಳ್ಳೆಯವನೆಂದು ಹೇಳಿಸಿಕೊಳ್ಳುವುದೇ ಕಷ್ಟವಲ್ಲದೆ ಕೆಟ್ಟವನೆಂದು ಹೇಳಿಸಿ

ಕೊಳ್ಳಲು ಒಂದು ಕ್ಷಣವೂ ಬೇಕಾಗದು" ಎಂದನು ಗೋಪಾಲಯ್ಯ.

"ಹೀಗೆ ಸುಮ್ಮನೆ ಹೇಳಿದರೆ ಸಾಲದು. ನನಗೂ ನಿಮ್ಮ ಮಗನಿಗೂ ಸಹಾ ಈ ಮಾತನ್ನು ರುಜು ಪಡಿಸಿ ನಿರೂಪಿಸಬೇಕು." ಎಂದನು ಚಿರಂಜೀವಿ.

ಗೋಪಾಲಯ್ಯ ತನ್ನ ಮಗನನ್ನು ಮತ್ತೆ ಕರೆದನು. ಚಿರಂಜೀವಿಯಂತಹ ಮಹಾನುಭಾವನು ತನ್ನ ಪಕ್ಷದವನೆಂದು ತಿಳಿದುಹೋಗಿತ್ತು, ಗೋವಿಂದಯ್ಯನಿಗೆ. ಆದುದರಿಂದ ತಂದೆಯಿಂದ ಬೈಗಳು ತಿನ್ನುವುದನ್ನು ಶಾಶ್ವತವಾಗಿ ತಪ್ಪಿಸಿಕೊಳ್ಳಬಹುದೆಂದು ಅವನಿಗೆ ತೋರಿತು. ತಂದೆ ಹೇಳಿದಂತೆ ಮಾಡಲಿಕ್ಕೆ ಒಪ್ಪಿಕೊಂಡನು.

ಮೂವರೂ ಕೂಡಿ ಒಳ್ಳೆಯ ಮನುಷ್ಯನೆನಿಸಿದ ರಾಮಯ್ಯನ ಮನೆಗೆ ಹೋದರು. ರಾಮಯ್ಯ ತನ್ನ ಅನುಭವವನ್ನು ಅವರಿಗೆ ಹೇಳಿದನು. ಅವನು ತನ್ನ ಸೇವಕರನ್ನು ತುಂಬ ಆದರದಿಂದ ನೋಡುವನೆಂದು ಹೆಸರು ಪಡೆದಿದ್ದನು. ಅಂತಹ ಸಜ್ಜನನು ಒಂದು ದಿನ ಯಾವುದಕ್ಕೋ ಮಹಾಕೋಪ ಬಂದು ತನ್ನ ಆಳನ್ನು ವಿಪರೀತವಾಗಿ ಹೊಡೆದನು. ಒಂದೇ ಒಂದು ಸಾರಿ ಮಾತ್ರ ಇಂತಹ ವಿಪರೀತವಾಗಿತ್ತು. ಆದರೂ ಸೇವಕರ ದೃಷ್ಟಿಯಲ್ಲಿ ಅವನು ಕೆಟ್ಟವನೇ ಆದನು. ಆಮೇಲೆ ಅವನು ಸೇವಕರೊಂದಿಗೆ ಎಷ್ಟೇ ಒಳ್ಳೆಯತನದಲ್ಲಿ ನಡೆದರೂ, ಸೇವಕರೊಳಗೆ ಉಂಟಾದ ಅವನ ಮೇಲಿನ ಕೆಟ್ಟ ಅಭಿಪ್ರಾಯ ಹೋಗಲೇ ಇಲ್ಲ.

"ಇದರಿಂದ, ಎಷ್ಟೇ ಒಳ್ಳೆಯ ಕೆಲಸ ಮಾಡಿದರೂ ಒಂದು ಕೆಟ್ಟ ಕಲಸ ಮಾತ್ರದಿಂದ ಅವನ ಒಳ್ಳೆಯತನವೆಲ್ಲವೂ ಕೊಚ್ಚಿ ಹೋಗುತ್ತದೆಂದು ತಿಳಿಯುತ್ತದಲ್ಲವೇ?" ಎಂದು ತನ್ನ ವಿಷಯವನ್ನು ಹೇಳಿ ಮುಗಿಸಿದ ರಾಮಯ್ಯ.

ಗೋಪಾಲಯ್ಯ ತನ್ನ ಮಗನನ್ನೂ ಚಿರಂಜೀವಿಯನ್ನೂ ಕರೆದುಕೊಂಡು ಅಂತಹರಾದ ಇನ್ನೂ



ಮೂವರ ಬಳಿಗೆ ಹೋದನು. ಎಲ್ಲರೂ ರಾಮಯ್ಯ ಹೇಳಿದಂತೆಯೇ ಒಳ್ಳೆಯ ಹೆಸರು ತೆಗೆದುಕೊಳ್ಳುವುದು ಕಷ್ಟವೆಂತಲೂ ಕೆಟ್ಟ ಹೆಸರು ತೆಗೆದುಕೊಳ್ಳುವುದೇ ಸುಲಭವೆಂತಲೂ ಹೇಳಿದರು.

"ನಾಲ್ವರನ್ನು ತೋರಿಸಿದೆನಲ್ಲ? ಈಗೇನು ಹೇಳುತ್ತೀರಿ?" ಎಂದು ಚಿರಂಜೀವಿಯನ್ನು ಕೇಳಿದನು ಗೋಪಾಲಯ್ಯ.

"ನಿಲ್ಲಿರಿ. ನನ್ನ ಮಾತಿನಲ್ಲಿಯ ಸತ್ಯವನ್ನೂ ತೋರಿಸಿ ಕೊಡುತ್ತೇನೆ, ಈ ಊರಿನಲ್ಲಿ ಶುದ್ಧ ಪೋಕರಿಯಾಗಿರುವ ಒಬ್ಬನ ಹೆಸರನ್ನು ಹೇಳಿರಿ" ಎಂದನು ಚಿರಂಜೀವಿ.

"ಯಾರು ಯಾಕೆ? ನನ್ನ ಮಗನೇ ಇದ್ದಾನೆ. ಆದರೆ ಅವನು ನಮ್ಮ ಜತೆಯಲ್ಲೇ ಬಂದವನಾದುದರಿಂದ ಇನ್ನೊಬ್ಬನ ಹೆಸರು ಹೇಳುತ್ತೇನೆ. ಚಂದ್ರಯ್ಯ ಅಂತ ಇದ್ದಾನೆ, ಮಹಾದುಷ್ಟ" ಎಂದನು ಗೋಪಾಲಯ್ಯ.

ಮೂವರೂ ಕೂಡಿ ತಾವು ಮೊದಲು ನೋಡಿದ ರಾಮಯ್ಯನೇ ಮೊದಲಾದವರಲ್ಲಿಗೆ ಹೋಗಿ ಚಂದ್ರಯ್ಯನನ್ನು ಕುರಿತು ಅವರ ಅಭಿಪ್ರಾಯ ಕೇಳಿದರು.

"ಅವನೊಬ್ಬ ಮಹಾದುಷ್ಟ. ಅವನ ಮುಖ ನೋಡಿದರೆ ಅನ್ನ ಸಿಕ್ಕದು; ಪಂಚಮಹಾಪಾತಕಗಳೂ ಸುತ್ತಿಕೊಂಡಾವು." ಎಂದರು ರಾಮಯ್ಯನೇ ಮೊದಲಾದ ಎಲ್ಲರೂ.

ಆಮೇಲೆ ಮೂವರೂ ಕೂಡಿ ಚಂದ್ರಯ್ಯನ ಮನೆಗೆ ಹೋದರು. ಚಿರಂಜೀವಿ ಅವನೊಂದಿಗೆ, "ಏನಪ್ಪಾ, ನಿನ್ನನ್ನು ಕುರಿತು ಊರಿನವರೆಲ್ಲಾ ತುಂಬಾ ಕೆಟ್ಟವನೆಂದು ಹೇಳುತ್ತಾರೆ. ಆ ವಿಷಯ ನಿನಗೆ ಗೊತ್ತೇ ?" ಎಂದು ಕೇಳಿದನು.

"ಗೊತ್ತು. ಯಾವ ಪುಂಡ ಏನು ಹೇಳಿಕೊಂಡರೆ ನನಗೊಂದು ಲೆಕ್ಕವೇ?" ಎಂದ ಚಂದ್ರಯ್ಯ. ಅವನಿಂದ ಅಷ್ಟೇ ಪ್ರತ್ಯುತ್ತರ ಪಡೆದು ಮೂವರೂ ಅಲ್ಲಿಂದ ಹಿಂದಿರುಗಿದರು.

ದಾರಿಯಲ್ಲಿ ಒಬ್ಬ ಭಿಕ್ಷುಕನು ಅವರ ಮುಂದೆ ಬಂದನು. ಚಿರಂಜೀವಿ ಅವನನ್ನು ಕರೆದು, "ಕೋಣನ ಹಾಗೆ ಬೆಳೆದಿದ್ದೀಯ ! ಕೆಲಸ ಮಾಡಿ ಬದುಕಲಿಕ್ಕೇನು ಧಾಡಿ ? ಹೀಗೆ ಬೇಡಿ ತಿನ್ನ ಬೇಕೇ ಮನುಷ್ಯನಾಗಿ ?" ಎಂದನು.

"ಇಷ್ಟವಿದ್ದರೆ ಭಿಕ್ಷೆ ನೀಡಿರಿ. ಇಲ್ಲದಿದ್ದರೆ ಬಿಟ್ಟು ಬಿಡಿ. ಅಷ್ಟೇ ಹೊರತು ಸುಮ್ಮನೆ ಗಳಹ ಬೇಡಿ. ನಾನು ನನ್ನ ಪಾಡಿಗೆ ಬೇಡಿ ತಿನ್ನುವೆನೇ ಹೊರತು ಕಾಡಿ ತಿನ್ನುವುದಿಲ್ಲ. ಕೆಟ್ಟ ಕೆಲಸ ಮಾಡುವುದೂ ಇಲ್ಲ" ಎಂದನು ಭಿಕ್ಷುಕ.

ಅವನು ಹೊರಟುಹೋದ ಮೇಲೆ ಚಿರಂಜೀವಿ ನಕ್ಕು. "ನೋಡಿದಿರಷ್ಟೆ ? ಭಿಕ್ಷೆ ಬೇಡುವವನೂ ಮಾತಿಗೆ ಬೀಳುವುದಿಲ್ಲ. ಊರವರು ಪೂರಾ ತನ್ನನ್ನು ಬೈಯುತ್ತಿದ್ದರೂ ಕೆಟ್ಟ ಕೆಲಸ ಮಾಡುವವನು ಬೈಗುಳಗಳನ್ನೆಲ್ಲ ಸಹಿಸಿಕೊಂಡು ಕೆಟ್ಟ ಕೆಲಸ ಮಾಡಿಕೊಂಡೇ ಇರುತ್ತಾನೆ. ಅಂತಹ ಸಹನೆ ಕೆಟ್ಟವರಿಗೇ ಹೊರತು ಬೇರೆಯವರಿಗೆ ಸಾಧ್ಯವಾಗದು. ಅದಕ್ಕೇ ಕೆಟ್ಟವರೆಂದು ಹೆಸರು ಪಡೆಯುವುದು ಕಷ್ಟವೆಂದು ಹೇಳಿದೆ. ಮಾನವ ಜನ್ಮವನ್ನು ಎತ್ತಿ ಮಾನಾಭಿಮಾನಗಳನ್ನು ಬಿಟ್ಟುಬಿಡುವುದಕ್ಕಿಂತಲೂ ಕಷ್ಟವಾದ ಕೆಲಸ ಏನಿದೆ ಈ ಲೋಕದಲ್ಲಿ ?" ಎಂದನು.

ಚಿರಂಜೀವಿ ಹೇಳಿದ ಮಾತಿನಲ್ಲಿರುವ ವ್ಯಂಗ್ಯವು ಗೋಪಾಲಯ್ಯನಿಗೆ ಅರ್ಥವಾಯಿತು. ಗೋವಿಂದಯ್ಯನಿಗೂ ಆ ಮಾತುಗಳು ನಾಚಿಕೆಯನ್ನುಂಟುಮಾಡಿದುವು. ಅಂತೆಯೇ ಅವನು ಕ್ರಮವಾಗಿ ತನ್ನ ಕೆಡುಕುತನವನ್ನು ಬಿಡುತ್ತ ಒಳ್ಳೆಯ ಬುದ್ಧಿಯವನಾದನು. ತಂದೆಯ ಚಿಂತೆಹೋಯಿತು.





# ದೇವೀಭಾಗವತ

## ೫. ಮತ್ಸ್ಯಗಂಧಿಯ ಜನನ

ಜನಕ ಮಹಾರಾಜನು ಹೇಳಿದ ಮಾತು ಕೇಳಿ ಶುಕನು "ರಾಜಾ, ನೀವು ಹೇಳಿದ ಮಾತುಗಳನ್ನು ಅತ್ಯಾಸಕ್ತಿಯಿಂದ ಕೇಳಿದೆನು. ಬಹಳ ಸಂತೋಷವೂ ಆಯಿತು. ನನ್ನ ತಂದೆ ಸರಿಯಾದ ಸ್ಥಳಕ್ಕೆ ನನ್ನನ್ನು ಕಳುಹಿಸಿದ್ದಾರೆ. ಆದರೆ ನನ್ನ ಸಂದೇಹವು ತೀರಲಿಲ್ಲ. ಮದುವೆಯಾದ ಮೇಲೆ ಹೆಂಡತಿಯೊಂದಿಗೆ ಸುಖ ಪಡುತ್ತಿದ್ದರೆ, ಮನುಷ್ಯನು ಅದರಲ್ಲೇ ಸಿಕ್ಕಿಕೊಂಡು ಕಷ್ಟಪಡುತ್ತಾನೆ. ಸುಖಪಡದೆಹೋದರೆ, ಅಥವಾ ಸುಖವಿಲ್ಲದೇ ಹೋದರೆ ಖಿನ್ನನಾಗುತ್ತಾನೆ. ಅಂತಹವನಿಗೆ ಮೋಕ್ಷ ಹೇಗೆ ?" ಎಂದು ಕೇಳಿದನು.

"ತಾವರೆ ಎಲೆಯ ಮೇಲಿನ ನೀರಿನ ಹಾಗೆ ನಿರ್ಲಿಪ್ತವಾಗಿ ಮಾಡುವ ಕರ್ಮಗಳು ಕೆಟ್ಟವೇ ಆದರೂ ಒಳಿತನ್ನೇ ಮಾಡುತ್ತವೆ" ಎಂದನು ಜನಕ.

"ಮಾಯೆಯಲ್ಲಿ ಸಿಕ್ಕಿಕೊಂಡವನು ನಿರ್ಲಿಪ್ತನು ಹೇಗಾಗುತ್ತಾನೆ ? ದೀಪದ ಹೆಸರು ಹೇಳಿದ ಮಾತ್ರಕ್ಕೇ ಕತ್ತಲೆ ಓಡಿಹೋಗುವುದಿಲ್ಲವಷ್ಟೆ ? ಹಾಗೆಯೇ ಶಾಸ್ತ್ರಜ್ಞಾನ ಸಂಪಾದಿಸಿದ ಮಾತ್ರದಿಂದ ಮನುಷ್ಯನಲ್ಲಿರುವ ಅಜ್ಞಾನವು ಹೋಗಿಬಿಡುವುದಿಲ್ಲವಷ್ಟೇ ? ಆಚರಣೆಯ ಅನುಭವವು ಇರಬೇಕಲ್ಲವೆ ? ನೀವು ರಾಜರಾಗಿರುವುದರಿಂದ ನಿಮಲ್ಲಿ ಧನವಾಂಛೆ, ಸ್ತ್ರೀವಾಂಛೆ, ಪುತ್ರವಾಂಛೆ, ರಾಜ್ಯವಾಂಛೆಗಳು ಇರುತ್ತವಷ್ಟೆ ? ರಾಜರಾಗಿರುವುದರಿಂದ ದುಷ್ಟ ಶಿಕ್ಷಣ ಶಿಷ್ಟರಕ್ಷಣ ಮಾಡದಿರಲು ಸಾಧ್ಯವಿಲ್ಲವಷ್ಟೆ ? ಆದುದರಿಂದ ನೀವು ಜೀವನ್ಮುಕ್ತರಾಗಿರುವುದು ಹೇಗೆ ಸಾಧ್ಯ ? ಈ ಭೇದಗಳನ್ನು ನಡೆಯಿಸಿಕೊಂಡು ಹೋಗುವ ನಿಮಗೆ ಮೋಕ್ಷಬರುತ್ತದೆಂಬುದನ್ನು ಹೇಗೆತಾನೇ ನಂಬಲಿ ? ನಾನೆಂದರೆ, ನನಗೆ ಏನೂ ಇಲ್ಲ. ಸುಖವೂ ಇಲ್ಲ. ದುಃಖವೂ ಇಲ್ಲ. ಶತ್ರುವೂ ಇಲ್ಲ. ನನ್ನದೆಂದು ಅಧಿಕಾರ ನಡೆಸಲು ಸಣ್ಣ ಹಳ್ಳಿ ಕೂಡ ಇಲ್ಲ. ಕಾಡು ಮೃಗದ ಹಾಗಿರುವವನು ನಾನು. ನನ್ನಂಥವನಿಗಲ್ಲವೇ ನಿಜವಾದ ಮುಕ್ತಿ ?" ಎಂದು ಶುಕನು ಕೇಳಿದನು.

"ನೀನು ಎಷ್ಟು ಮಾತ್ರಕ್ಕೂ ಅಡವಿ ಮೃಗದಂಥವನಲ್ಲ. ಮನಸ್ಸಿನಲ್ಲಿ ಎಲ್ಲವನ್ನೂ ಅರಿತವನು. ಸನ್ಯಾಸಿ



ಯಾಗಿ ಕಾಡಿನಲ್ಲಿದ್ದ ಮಾತ್ರಕ್ಕೆ ವಿಚಾರಗಳೂ ಚಿಂತನೆಗಳೂ ಹೋಗಿಬಿಡುವುದಿಲ್ಲ. ಮಮಕಾರವನ್ನು ಬಿಟ್ಟು ಯಾವ ಮಾರ್ಗವನ್ನು ಅವಲಂಬಿಸಿದರೂ ಮೋಕ್ಷ ಪಡೆಯಬಹುದು. ಮಮಕಾರವನ್ನು ಬಿಡದೇ ಹೋದರೆ ಯಾವ ಮಾರ್ಗವನ್ನು ಅವಲಂಬಿಸಿದರೂ ಮುಕ್ತಿಬರಲಾರದು." ಎಂದನು ಜನಕರಾಜ.

"ನಿಮ್ಮ ಮಾತು ನಿಜ" ಎಂದು ಶುಕನು ತೃಪ್ತನಾಗಿ ಜನಕನಿಂದ ಅಪ್ಪಣೆಪಡೆದು ಹಿಂದಿರುಗಿ ತಂದೆಯ ಬಳಿಗೆಬಂದನು.

"ಅಪ್ಪಾ, ಜನಕರಾಜನು ನಿನ ಸಂದೇಹಗಳನ್ನೆಲ್ಲ ತೀರಿಸಿದನೇ?" ಎಂದು ವ್ಯಾಸನು ಶುಕನನ್ನು ಕೇಳಿದನು. "ಹೌದು. ಮನಸ್ಸು ತಿಳಿಯಾಗಿದೆ. ಆ ಜನಕನ ಹಾಗೆ ಇರಲು ನನಗೇನೂ ಅಭ್ಯಂತರವಿಲ್ಲ" ಎಂದನು ಶುಕ.

ಮಗನ ಮಾತು ಕೇಳಿ ವ್ಯಾಸನಿಗೆ ಸಂತೋಷವಾಯಿತು. ಈ ಮೊದಲೇ ನೋಡಿಟ್ಟಿದ್ದ ಪೀವರಿ ಎಂಬ ಕನ್ಯೆಯನು ತಂದು ಶುಕನಿಗೆ ಮದುವೆ ಮಾಡಿದನು. ಶುಕನು ಸಂಸಾರದಲ್ಲಿ ನಿರ್ಲಿಪ್ತನಾಗಿರುತ್ತ, ಅವಳೊಂದಿಗೆ ಸಂಸಾರ ಸಾಗಿಸಿಕೊಂಡಿರಲು, ಗೌರವ ಪ್ರಭ, ದೇವಶ್ರುತ, ಭೂರಿ, ಕೃಷ್ಣ ಎಂಬ ನಾಲ್ಕು ಮಂದಿ ಮಗಂದಿರಿಗೆ ತಂದೆಯಾದನು. ಅನಂತರ ಕೀರ್ತಿ ಎಂಬ ಮಗಳೂ ಅವರಿಗೆ ಹುಟ್ಟಿದಳು. ವಿಭ್ರಾಜನ ಮಗನಾದ ಅಣುಹನೆಂಬವನೊಂದಿಗೆ ಕೀರ್ತಿಗೆ ಮದುವೆಯಾಯಿತು. ಅವಳಿಗೆ ಹುಟ್ಟಿದ ಮಗನ ಹೆಸರು ಬ್ರಹ್ಮದತ್ತ.

ಬ್ರಹ್ಮದತ್ತನು ರಾಜನಾಗಿ ಪ್ರಜಾಪರಿಪಾಲನೆ ಮಾಡಿಕೊಂಡಿರುವಾಗ ಒಂದು ದಿನ ನಾರದಮುನಿ ಅವನನು ನೋಡಲು ಬಂದನು. ನಾರದನು ಅವನಿಗೆ ಮಾಯಾಬೀಜೋಪದೇಶವನ್ನು ಉಪದೇಶಿಸಿದುದರಿಂದ ಅವನಲ್ಲಿ ಜ್ಞಾನೋದಯವಾಯಿತು. ಅದರೊಂದಿಗೆ ವೈರಾಗ್ಯವೂ ಹುಟ್ಟಿದುದರಿಂದ ಅವನು ರಾಜ್ಯ ಭಾರವನ್ನು ಮಗನ ಮೇಲೆಹಾಕಿ ತಪಸ್ಸು ಮಾಡಲು ಬದರಿಕಾಶ್ರಮಕ್ಕೆ ಹೊರಟುಹೋದನು.

ಶುಕನು ಕೂಡಾ ವೃದ್ಧಾಪ್ಯವು ಪ್ರಾಪ್ತವಾಗುವಾಗ ತಂದೆಯನ್ನು ಬಿಟ್ಟು ಕೈಲಾಸ ಶಿಖರಕ್ಕೆ ಹೋದನು. ಅಲ್ಲಿ ಸ್ವಲ್ಪ ಕಾಲ ತಪಸ್ಸಿನಲ್ಲಿಯೂ ಧ್ಯಾನದಲ್ಲಿಯೂ ಇದ್ದನು. ಕಟ್ಟಕಡೆಗೆ ಅವನು ಕೈಲಾಸ ಶಿಖರದ ತುತ್ತತುದಿಗೆ ಹೋಗಿ ಆಕಾಶಕ್ಕೆ ಹಾರಿ ಸಿದ್ಧಿ ಹೊಂದಿದನು.

ಮಗನು ಹೊರಟು ಹೋದಮೇಲೆ ವ್ಯಾಸನಿಗೆ ತುಂಬಾ ಚಿಂತೆಯಾಯಿತು; ಬಾಧೆಯೂ ಆಯಿತು, ಇದ್ದಲ್ಲಿರಲಾಗದೆ "ಅಯ್ಯೊ! ಪುತ್ರಾ! ಶುಕಾ!" ಎಂದು ಕೂಗುತ್ತಾ ಕೈಲಾಸ ಶಿಖರಕ್ಕೆ ಹೋದನು. ಆಗ ಆಕಾಶಕ್ಕೆ ಹಾರಿದ ಶುಕನು ಪ್ರತಿಧ್ವನಿ ರೂಪದಲ್ಲಿ ತಂದೆಗೆ "ಓ ಓ! ಇದ್ದೇನೆ! ಇದ್ದೇನೆ! ನಾನು ಅಶರೀರಿಯಾಗಿದ್ದೇನೆ!" ಎಂದು ಆಕಾಶದಿಂದ ತಂದೆಗೆ ಉತ್ತರಕೊಟ್ಟನು.

ಆದರೂ ವ್ಯಾಸನು ಪುತ್ರಮೋಹದಿಂದ ಶೋಕಿಸುತ್ತಿರಲು ಶಿವನು ಅವನ ಮುಂದೆ ಬಂದು, "ನಿನ್ನ ಮಗನು ಯೋಗಿಗಳಿಗೆ ಕೂಡಾ ಲಭ್ಯವಾಗದಂತಹ ಮೋಕ್ಷವನ್ನು ಪಡೆದಿದ್ದಾನೆ. ಅವನಿಗಾಗಿ ಶೋಕಿಸುವುದು ಚೆನ್ನಾಗಿಲ್ಲ." ಎಂದನು.

"ಮಗನನ್ನು ನೋಡದೆ ನನ್ನ ಕಣ್ಣುಗಳು ತಣ್ಣಗಾಗಲಾರವು. ನನ್ನ ಮನಸ್ಸು ನನ್ನ ಹತೋಟಿಯಲ್ಲಿಲ್ಲ. ನಾನೇನು ಮಾಡಲಿ ? " ಎಂದನು ವ್ಯಾಸ.

ವ್ಯಾಸನ ಚಿಂತೆ ಪರಿಹಾರವಾಗುವಂತಹುದಲ್ಲವೆಂದು ತಿಳಿದು ಶಿವನು, "ಹಾಗಾದರೆ ನಿನ್ನ ಮಗನು ಯಾವಾಗಲೂ ನೆರಳಿನ ಹಾಗೆ ನಿನ್ನ ಜತೆಯಲ್ಲೇ ಇರುವಂತೆ ವರಕೊಡುತ್ತೇನೆ. ಇನ್ನು ಹೋಗು" ಎಂದನು. ತರುವಾಯ ವ್ಯಾಸನು ಸಾವಧಾನದಿಂದ ಆಶ್ರಮಕ್ಕೆ ಹಿಂದಿರುಗಿದನು. ವ್ಯಾಸನಜತೆಯಲ್ಲಿ ಶುಕನಿರುವುದು ವ್ಯಾಸನಿಗೆ ಮಾತ್ರ ಕಾಣುತಿತ್ತು.

ಹೀಗೆ ಸೂತಪುರಾಣಿಕನು ಹೇಳಲು, ಶುಕನ ಕಥೆಯನ್ನು ಕೇಳುತ್ತಿದ್ದ ಶೌನಕಾದಿ ಮುನಿಗಳು, "ವ್ಯಾಸನಂಥವನಿಗೇ ಸಂಸಾರದ ಬಂಧಪಾಶವು ಅಷ್ಟುರವಾಟ್ಟಿಗಿರುವುದನ್ನು ಕೇಳಿ ತುಂಬಾ ಆಶ್ಚರ್ಯವಾಗಿದೆ. ತರುವಾಯ ವ್ಯಾಸನು ಏನು ಮಾಡಿದನೆಂದು ದಯವಿಟ್ಟು ತಿಳಿಸಬೇಕು" ಎಂದರು. ಸೂತನು ಹೀಗೆಹೇಳತೊಡಗಿದನು :

## ಧೃತರಾಷ್ಟ್ರಾದಿಗಳ ಜನನ

ವ್ಯಾಸನಿಗೆ ಮುಖ್ಯ ಶಿಷ್ಯರಾಗಿದ್ದ ವೈಶಂಪಾಯನ, ಜೈಮಿನಿ. ಅಸಿತ, ಸುಮಂತ ಎಂಬವರು ಈ ಮೊದಲೇ ತಮ್ಮ ಗುರುವಿನಿಂದ ಅಪ್ಪಣೆ ಪಡೆದು ಹೊರಟು ಹೋಗಿದ್ದರು. ಈಗ ಶುಕನು ಕೂಡಾ ಹೊರಟು ಹೋದುದಾಯಿತು. ವ್ಯಾಸನುಕೂಡಾ ಎತ್ತಾದರೂ ಹೊರಟು ಹೋಗಬೇಕೆಂದು ಮಾಡಿದನು. ಆಗ ಅವನಿಗೆ ಅವನತಾಯಿ ಸತ್ಯವತಿಯ ಜ್ಞಾಪಕಬಂದಿತು. ಕೂಡಲೇ ಅವನು ಆಶ್ರಮವನ್ನು ಬಿಟ್ಟು, ತಾನು



ಹುಟ್ಟಿದ ಸ್ಥಳಕ್ಕೆ ಹೋಗಿ, ಅಲ್ಲಿದ್ದ ನಿಷಾದರನ್ನು ಸಂಧಿಸಿದನು. ಅವರೊಡನೆ ತನ್ನ ತಾಯಿಯನ್ನು ಕುರಿತು ವಿಚಾರಿಸಲು, ಸತ್ಯವತಿಯನ್ನು ಶಂತನು ರಾಜನು ಮದುವೆಮಾಡಿಕೊಂಡು ಹೋದ ಸಂಗತಿ ಗೊತ್ತಾಯಿತು.

ಅಷ್ಟು ತಿಳಿದ ಮೇಲೆ ವ್ಯಾಸನು ಅಲ್ಲಿಗೆ ಸಮೀಪದಲ್ಲಿರುವ ಸರಸ್ವತೀನದಿಯ ತೀರದಲ್ಲಿ ಆಶ್ರಮ ಏರ್ಪಡಿಸಿಕೊಂಡು ತಪಸ್ಸುಮಾಡುತ್ತ ಇದ್ದುಬಿಟ್ಟನು.

ಹೀಗಿರುವಾಗ ಶಂತನು ಮಹಾರಾಜನು ಹೆಂಡತಿಯಾದ ಸತ್ಯವತಿಯಲ್ಲಿ ಚಿತ್ರಾಂಗದ ಮತ್ತು ವಿಚಿತ್ರವೀರ್ಯರೆಂಬ ಇಬ್ಬರು ಕುಮಾರರನ್ನು ಪಡೆದ ಮೇಲೆ ಸ್ವಲ್ಪಕಾಲದಲ್ಲಿ ಸತ್ತುಹೋದನು. ಶಂತನುವಿಗೆ ಹಿರಿಯಮಗನಾಗಿ ಭೀಷ್ಮನೆಂಬವನು ಈ ಮೊದಲೇ ಇದ್ದನು. ಅವನು ತಂದೆಗೆ ಉತ್ತರಕ್ರಿಯೆಗಳನ್ನೇನೋ ಮಾಡಿದನು. ಆದರೆ ತಂದೆಯ ಸ್ಥಾನದಲ್ಲಿ ಪಟ್ಟಾಭಿಷೇಕ ಮಾಡಿಕೊಳ್ಳಲು ಅವನು ತಂದೆಗೆ ಮಾಡಿಕೊಟ್ಟ



ಪ್ರತಿಜ್ಞೆ ಅಡ್ಡಬಂದುದರಿಂದ, ತನ್ನ ಹಿರಿಯ ತಮ್ಮನಾದ ಚಿತ್ರಾಂಗದನಿಗೆ ಪಟ್ಟಗಟ್ಟಿದನು.

ಒಂದುಸಾರಿ ಚಿತ್ರಾಂಗದನು ಬೇಟೆಯಾಡಲು ಅರಣ್ಯಕ್ಕೆ ಹೋದನು. ಅಲ್ಲಿ ಅವನಿಗೆ ತನ್ನ ಹೆಸರಿನ ಒಬ್ಬಗಂಧರ್ವನೊಂದಿಗೆ ಜಗಳಹುಟ್ಟಿ ದೊಡ್ಡ ಹೋರಾಟವೇ ಆಯಿತು. ಆ ಯುದ್ಧದಲ್ಲಿ ಗಂಧರ್ವ ಚಿತ್ರಾಂಗದನು ಭೀಷ್ಮನತಮ್ಮನಾದ ಚಿತ್ರಾಂಗದ ನನ್ನು ಕೊಂದುಬಿಟ್ಟನು.

ತರುವಾಯ ಭೀಷ್ಮನು ತಮ್ಮನಿಗೆ ಉತ್ತರ ಕ್ರಿಯೆ ಗಳನ್ನು ಮಾಡಿ. ವಿಚಿತ್ರವೀರ್ಯನಿಗೆ ಪಟ್ಟವನ್ನು ಕಟ್ಟಿದನು. ಈ ವ್ಯವಸ್ಥೆಗೆ ವ್ಯಾಸನೂ ಒಪ್ಪಿಗೆಯಿತ್ತಿ ದ್ದನು. ವಿಚಿತ್ರವೀರ್ಯನು ಪ್ರಾಪ್ತ ವಯಸ್ಸಿಗೆ ಬಂದಾಗ ಭೀಷ್ಮನು ಅವನಿಗೆ ಮದುವೆಮಾಡಲು ಆಲೋಚಿಸ ತೊಡಗಿದನು.

ಆ ಸಮಯದಲ್ಲಿ ಕಾಶೀರಾಜನು ತನ್ನ ಮೂವರು ಕುಮಾರಿಯರಿಗೆ ಸ್ವಯಂವರದ ಏರ್ಪಾಡು ಮಾಡಿ, ಎಲ್ಲಾರಾಜರಿಗೂ ಆಹ್ವಾನ ಕಳುಹಿಸಿದನು. ಭೀಷ್ಮನು ಆ ಸ್ವಯಂವರಕ್ಕೆ ಹೋಗಿ, ಉಳಿದ ರಾಜರನ್ನೆಲ್ಲಾ ಯುದ್ಧದಲ್ಲಿ ಸೋಲಿಸಿ, ಕಾಶಿರಾಜನ ಕುಮಾರಿಯರಾದ ಅಂಬಾ, ಅಂಬಿಕಾ, ಅಂಬಾಲಿಕಾ ಎಂಬವರನ್ನು ತನ್ನ ರಥದ ಮೇಲೆ ಏರಿಸಿಕೊಂಡು ತಮ್ಮ ಮನೆಗೆತಂದು ಅವರನ್ನು ತಾಯಿಗೆ ತೋರಿ ಸಿದನು. ಅವಳ ಅನುಜ್ಞೆಯಂತೆ ಅವರು ಮೂವ ರನ್ನು ವಿಚಿತ್ರ ವೀರ್ಯನಿಗೆ ಮದುವೆಮಾಡಲು ಮುಹೂರ್ತ ನಿರ್ಣಯ ಕೂಡಾ ಮಾಡಿದನು.

ಆಗ ಅಂಬಾ ಎಂಬ ಹುಡುಗಿ, ನಾಚಿಕೆಯಿಂದ ತಲೆಬಗ್ಗಿಸಿಕೊಂಡು ಭೀಷ್ಮನೊಂದಿಗೆ, "ನನಗೆ ಈ ಮದುವೆಯ ಮೇಲೆ ಇಷ್ಟವಿಲ್ಲ. ನಾನೂ ಸಾಲ್ವನೂ ಪರಸ್ಪರ ಪ್ರೇಮಿಸಿ ಕೊಂಡವರು. ನೀವು ನಿಮ್ಮ ಶಕ್ತಿಯಿಂದ ನನ್ನನ್ನು ತಂದಿದ್ದೀರಿ. ನಿಮ್ಮ ಅಧೀನದಲ್ಲಿ ರುವ ನನ್ನನ್ನು ಇನ್ನು ಸಾಲ್ವರಾಜನೂ ಸ್ವೀಕರಿಸ ಲಾರನು. ನಾನು ನಿಮ್ಮನ್ನು ಮೆಚ್ಚಿದವಳಾದುದ ರಿಂದ ನಿಮ್ಮನ್ನು ಮದುವೆಯಾಗುತ್ತೇನೆ" ಎಂದಳು.

ಭೀಷ್ಮನು ಹಿರಿಯರೊಂದಿಗೂ ತಾಯಿ ಯೊಂದಿಗೂ, ಮಂತ್ರಿಗಳೊಂದಿಗೂ ಕಲೆತು ಆಲೋ ಚನೆ ಮಾಡಿ, ತಾನಂತೂ ಮದುವೆಯಾಗಲು ಸಾಧ್ಯ ವಿಲ್ಲವೆಂದು ಹೇಳಿ, ಅವಳನ್ನು ಸ್ವೇಚ್ಛೆಯಾಗಿ ಕಳುಹಿಸಿ ಬಿಟ್ಟನು. ಅಂಬಾ ಸೀದಾಸಾಲ್ವನ ಬಳಿಗೆ ಹೋಗಿ "ನಾನು ಭೀಷ್ಮನೊಂದಿಗೆ ನಿನ್ನನ್ನು ಪ್ರೇಮಿಸುತ್ತೇ ನೆಂದು ಹೇಳಿದೆ. ಅವನು ನನ್ನನ್ನು ನಿನ್ನ ಬಳಿಗೆ ಕಳುಹಿಸಿದನು. ಆದುದರಿಂದ ನೀನು ನನ್ನನ್ನು ಮದುವೆ ಮಾಡಿಕೊಳ್ಳಬೇಕು" ಎಂದಳು.

"ನನ್ನ ಕಣ್ಣೆದಿರಿನಲ್ಲಿಯೇ ಭೀಷ್ಮನು ನಿನ್ನನು ಮುಟ್ಟಿ ಎತ್ತಿಕೊಂಡನು. ಪರಕೀಯನೊಬ್ಬ ಮುಟ್ಟಿ ಬಿಟ್ಟವಳನ್ನು ಯಾವನಾದರೂ ಮದುವೆಯಾಗುವು ದುಂಟೆ? ಹೇಗೆಬಂದೆಯೋ ಹಾಗೆಯೇತಿರುಗಿ ಹೋಗಿಬಿಡು" ಎಂದನು ಸಾಲ್ವ.



"ಅಯ್ಯೋ! ಯಾರಿಗೂ ಬೇಡದವಳಾದೆನಲ್ಲಾ!" ಎಂದು ವಿಲಪಿಸುತ್ತಾ ಅಂಬಾ ಭೀಷ್ಮನ ಬಳಿಗೇ ತಿರುಗಿಬಂದು, "ಸಾಲ್ವನು ನನ್ನನ್ನು ನಿರಾಕರಿಸಿದನು. ನನಗೆ ಬೇರೆ ದಿಕ್ಕಿಲ್ಲ. ನನ್ನನ್ನು ಮದುವೆ ಮಾಡಿಕೊಳ್ಳಲು ನೀವೇ ತಕ್ಕವರು." ಎಂದು ಬೇಡಿಕೊಂಡಳು.

ಒಬ್ಬನನ್ನು ಪ್ರೇಮಿಸಿದವಳನ್ನು ಇನ್ನೊಬ್ಬರು ಮದುವೆಯಾಗುವುದು ತಪ್ಪು. ನಾನಂತೂ ಮದುವೆಯನ್ನೇ ಮಾಡಿಕೊಳ್ಳಲಾರೆ. ನೀನು ನಿನ್ನ ತಂದೆಯ ಬಳಿಗೇ ಹೋಗು" ಎಂದನು ಭೀಷ್ಮ.

ಆದರೆ ಅಭಿಮಾನಿನಿಯಾದ ಅಂಬಾ ತಂದೆಯ ಬಳಿಗೆ ಹೋಗದೆ, ತಪಸ್ಸು ಮಾಡಲು ಕಾಡಿಗೆ ಹೋದಳು. ಭೀಷ್ಮನು ಉಳಿದಿಬ್ಬರು ಕನ್ಯೆಯರನ್ನು ವಿಚಿತ್ರವೀರ್ಯನಿಗೆ ಕೊಟ್ಟು ಮದುವೆಮಾಡಿದನು. ವಿಚಿತ್ರವೀರ್ಯನು ಆ ಪತ್ನಿಯರೊಂದಿಗೆ ಸುಖವಾಗಿ ಕಾಲ ಕಳೆಯುತ್ತ ಒಂಬತ್ತು ವರ್ಷ ರಾಜ್ಯವಾಳಿ, ಕಡೆಗೆ ಕ್ಷಯರೋಗದಿಂದ ಸತ್ತನು.

ತನ್ನ ಎರಡನೇ ಮಗನೂ ಸತ್ತು ಹೋದುದನ್ನು ನೋಡಿ ಸತ್ಯವತಿಗೆ ತುಂಬಾ ದುಃಖವಾಯಿತು. ಅವಳು ಮುಂದಿನ ವಿಚಾರ ತೆಂದುಕೊಂಡು, ಭೀಷ್ಮನನ್ನು ಕರೆದು ಅವನೊಂದಿಗೆ," ನೀನು ಕೂಡಾ ಶಂತನು ಮಹಾರಾಜರ ಮಗನೇ ಆದುದರಿಂದ, ಪಟ್ಟಗಟ್ಟಿಸಿಕೊಂಡು, ರಾಜ್ಯಭಾರವನ್ನು ವಹಿಸಿ, ನನಗೆ ಮಕ್ಕಳಿಲ್ಲದ ಕೊರತೆಯನ್ನು ತೀರಿಸು. ಮಕ್ಕಳಿಲ್ಲದಿದ್ದರೆ ವಂಶವೇ ನಶಿಸುವುದಷ್ಟೆ? ಅಂಬಿಕಾ, ಅಂಬಾಲಿಕೆಯರ ಕೈಗಳನ್ನು ನೀನೇ ಹಿಡಿದು ಅವರಿಗೆ ಗಂಡನಾಗಿರುವುದರಲ್ಲಿ ತಪ್ಪೇನಿಲ್ಲ. ಅವರಿಂದ ಪುತ್ರರನ್ನು ಪಡೆದು ನನ್ನನ್ನು ತೃಪ್ತಿಗೊಳಿಸು. ಇದು ಧರ್ಮ ಬಾಹಿರವಾದ ಕೆಲಸವೇನಲ್ಲ" ಎಂದಳು.

"ನಿನ್ನ ಮದುವೆಯ ಸಂದರ್ಭದಲ್ಲಿ ನಾನು ತಂದೆಯ ಮುಂದೆ ಮದುವೆಯಾಗಲಾರೆನೆಂದೂ ಪಟ್ಟಗಟ್ಟಿಸಿಕೊಳ್ಳಲಾರೆನೆಂದೂ ಪ್ರತಿಜ್ಞೆಮಾಡಿದ್ದೇನೆ. ಅದನ್ನು ಮೀರಲಾರೆ. ಸತ್ಕುಲದ ಬ್ರಾಹ್ಮಣನ ಮೂಲಕ ಮಕ್ಕಳನ್ನು ಪಡೆದು ವಂಶವನ್ನು ಉಳಿಸುವುದೂ ಅಧರ್ಮವೇನಲ್ಲ." ಎಂದನು ಭೀಷ್ಮ

ಭೀಷ್ಮನು ಹೀಗೆ ಹೇಳಿದ ಕೂಡಲೇ ಸತ್ಯವತಿ ವ್ಯಾಸನನ್ನು ನೆನೆದಳು. ಕೂಡಲೇ ವ್ಯಾಸನು ಅಲ್ಲಿಗೆ ಬಂದನು. ಭೀಷ್ಮನು ಆತನಿಗೆ ತಕ್ಕ ಮರ್ಯಾದೆಗಳನ್ನು ಮಾಡಿದನು. ಸತ್ಯವತಿ ವ್ಯಾಸನೊಂದಿಗೆ, "ಅಪ್ಪಾ, ತಪೋಧನನಾಗಿ, ನನ್ನ ವರಪುತ್ರನಾದ ನೀನು, ಮಕ್ಕಳಿಲ್ಲದೆ ಸತ್ತ ನಿನ್ನ ತಮ್ಮಂದಿರ ವಂಶವನ್ನು ಉಳಿಸಬೇಕಾದ ಕರ್ತವ್ಯಬಂದಿದೆ. ಅವರ ಪತ್ನಿಯರಲ್ಲಿ ಪುತ್ರ ವರಪ್ರಸಾದವನ್ನು ನೀನೇ ನೀಡಬೇಕು" ಎಂದಳು.

ವ್ಯಾಸನು ತಾಯಿಯ ಆಜ್ಞೆಯಂತೆ, ಅಂಬಿಕೆಯಲ್ಲಿ ಒಬ್ಬ ಮಗನು ಹುಟ್ಟುವಂತೆ ವರವಿತ್ತನು. ಆದರೆ ಆ ಮಗು ಹುಟ್ಟು ಕುರುಡಾಗಿದ್ದುದರಿಂದ, ರಾಜ್ಯ



ಭಾರಕ್ಕೆ ತಕ್ಕವನಲ್ಲವೆಂದುಕೊಂಡು ಸತ್ಯವತಿ ವ್ಯಾಸನ ಸೇವೆಗೆ ಎರಡನೇ ಸೊಸೆ ಅಂಬಾಲಿಕೆಯನ್ನು ಕಳುಹಿಸಿದಳು. ವ್ಯಾಸನು ಅವಳಿಗೆ ಪ್ರಸಾದಿಸಿದ ಪುತ್ರನು ಪಾಂಡುರೋಗಿ ಯಾಗಿರುವುದನ್ನು ನೋಡಿ, ಇವನೂ ರಾಜ್ಯಾರ್ಹನಾಗಲಾರನೆಂದು ಭಾವಿಸಿ ಸತ್ಯವತಿ ಇನ್ನೊಂದು ಮಗುವಿಗಾಗಿ ಅಂಬಿಕೆಯನ್ನೇ ಮತ್ತೊಂದುಸಾರಿ ವ್ಯಾಸನ ಬಳಿಗೆ ಕಳುಹಿಸಿದಳು. ಆದರೆ ಅಂಬಿಕೆ ಅತ್ತೆಗೆ ಇದಿರಾಡಲು ಇಷ್ಟವಿಲ್ಲದೆ, ವ್ಯಾಸಮುನಿಯ ಬಳಿಗೆ ಹೋಗಲೂ ಅಳುಕಿ, ರಹಸ್ಯದಲ್ಲಿ ತನ್ನ ದಾಸಿಯನ್ನು ವ್ಯಾಸನ ಬಳಿಗೆ ಕಳುಹಿಸಿದಳು. ಆ ದಾಸಿಗೆ ವ್ಯಾಸನು ಪ್ರಸಾದಿಸಿದ ಪುತ್ರನೇ ವಿದುರ. ಆತನು ಮತ್ತೊಬ್ಬ ವ್ಯಾಸನಂತಹ ಜ್ಞಾನಿ.

ಹೀಗೆ ಭರತವಂಶವನ್ನು ಎಬ್ಬಿಸಲು ವ್ಯಾಸನಿಂದಲೇ ಸಾಧ್ಯವಾಯಿತು. ಅವನಿಂದ ಧೃತರಾಷ್ಟ್ರನೂ, ಪಾಂಡುರಾಜನೂ, ವಿದುರನೂ ಹುಟ್ಟಿ ತುಂಬಾ ಪ್ರಸಿದ್ಧರಾಗಿ ಬೆಳಗಿದರು.

ಸೂತಪುರಾಣಿಕನು ಹೀಗೆ ಹೇಳಲು, ಶೌನಕಾದಿಗಳು ಅಡ್ಡಬಂದು. "ಮಹಾನುಭಾವ, ಸತ್ಯವತಿಗೆ ಶಂತನುವಿನೊಂದಿಗೆ ವಿವಾಹವಾದ ಬಗೆ ಹೇಗೆ? ಅದಕ್ಕೆ ಮೊದಲೇ ಸತ್ಯವತಿಗೆ ವ್ಯಾಸನು ಮಗನಾದ ಕಥೆ ಏನೋ? ಹೇಳಬೇಕು" ಎಂದರು.

ಅದಕ್ಕೆ ಸೂತಪುರಾಣಿಕನು ಆ ವೃತ್ತಾಂತವನ್ನು ಹೀಗೆ ಹೇಳಿದನು: ಹಿಂದೆ ಚೇದಿದೇಶವನ್ನಾಳಿಕೊಂಡಿದ್ದ ಉಪರಿಚರವಸು ಎಂಬವನು ಅತ್ಯಂತ ತೇಜೋಬಲ ಪರಾಕ್ರಮವಂತನು. ಅವನು ಇಂದ್ರನನ್ನು ತನ್ನ ತಪಸ್ಸಿನಿಂದ ಮೆಚ್ಚಿಸಿ ಇಂದ್ರನಿಂದ ದಿವ್ಯ ವಿಮಾನವೊಂದನ್ನು ಪಡೆದಿದ್ದನು. ಯಾವಾಗಲೂ ಆ ವಿಮಾನದಲ್ಲಿ ಕುಳಿತುಕೊಂಡು ಆಕಾಶಮಾರ್ಗದಲ್ಲಿ ತಿರುಗಾಡುತ್ತಿದ್ದುದರಿಂದಲೇ ಅವನಿಗೆ "ಉಪರಿಚರ" ಎಂಬ ಹೆಸರುಬಂದಿತ್ತು.

ಅವನ ಪತ್ನಿಯಾದ ಗಿರಿಕಾದೇವಿ ಅತ್ಯಂತಸುಂದರಿ. ಅವಳ ಸೇವಾ ಸಾಂಗತ್ಯದಿಂದ ದೇವೇಂದ್ರನಭೋಗಗಳನ್ನು ಅನುಭವಿಸುತ್ತ, ಅವನಂತೆಯೇ ಬಲಸಂಪನ್ನರಾದ ಐದು ಮಂದಿ ಕುಮಾರರನ್ನು ಪಡೆದಿದ್ದನು. ಆ ಐದು ಮಂದಿ ಕುಮಾರರನ್ನೂ ಐದು ದೇಶಗಳಿಗೆ ರಾಜರನ್ನಾಗಿಯೂ ಮಾಡಿದ್ದನು.

ಒಂದು ದಿನ ಅವನ ಪತ್ನಿ ಗಿರಿಕಾ ಅತ್ಯಂತ ಶುಚಿರ್ಭೂತಳಾಗಿ ಪತಿಯ ದರ್ಶನಕ್ಕಾಗಿ ಕಾದಿದ್ದಳು. ವಸುರಾಜನು ಅವಳ ಕೋಣೆಗೆ ಹೋಗಲು ಸಿದ್ಧನಾದಾಗ, ಅವನ ತಂದೆ ಅವನನ್ನು ಕರೆದು, "ಈ ದಿನ ನಿನ್ನ ತಾತನ ಶ್ರಾದ್ಧ. ನೀನು ಬೇಗನೇ ಹೋಗಿ ಅದಕ್ಕೆ ಬೇಕಾದುದನ್ನು ತೆಗೆದುಕೊಂಡು ಬಾ. ಬೇಟೆಯಾಡಿ ಒಳ್ಳೆಯಮೃಗವನ್ನೂ ತಾ" ಎಂದನು.

ಹೆಂಡತಿ ಮುಖ್ಯವೋ ತಂದೆಯ ಮಾತು ಮುಖ್ಯವೋ ಎಂದು ಸ್ವಲ್ಪ ಹೊತ್ತು ಮಥಿತನಾಗಿ ವಸುರಾಜನು ತಂದೆಯ ಮಾತೇ ಮುಖ್ಯವೆಂದು ನಿಶ್ಚಯಿಸಿ, ಮೊದಲು ಸ್ನಾನಮಾಡಲು ಯಮುನೆಗೆ

ಹೋದನು. ಹೆಂಡತಿಯನ್ನು ನೆನೆಯುತ್ತ ಅವನು ಸ್ನಾನಮಾಡುವಾಗ, ಒಂದು ಮೀನು ಅವನ ಶರೀರವನ್ನು ಬಳಸಿಕೊಂಡಿತು. ಆ ಮೀನು ಅದ್ರಿಕಾ ಎಂಬ ಅಪ್ಸರಸಿಯಾದುದರಿಂದ ಮೀನಿನ ರೂಪದಲ್ಲೇ ಅವಳು ಗರ್ಭಿಣಿಯಾದಳು. ಅವಳು ಪಾಪ, ಬ್ರಾಹ್ಮಣ ಶಾಪದಿಂದ ಮೀನಾಗಿದ್ದಳು.

ಮುನಿಗಳು ಮತ್ತೆ ಸೂತಪುರಾಣಿಕನಿಗೆ ಅಡ್ಡ ಬಂದು "ಅದ್ರಿಕಳಿಗೆ ಹಾಗೇಕೆ ಶಾಪ ಬಂತು?" ಎಂದು ಪ್ರಶ್ನಿಸಿದರು. ಸೂತನು ಅದನ್ನೂ ಹೇಳಿದನು.

## ಮತ್ಸ್ಯಗಂಧಿಯ ಜನನ

ಒಂದುಸಾರಿ ಒಬ್ಬ ಬ್ರಾಹ್ಮಣನು ಯಮುನೆಯಲ್ಲಿ ಇಳಿದು ಸಂಧ್ಯಾವಂದನೆ ಮಾಡುತ್ತಿರುವಾಗ, ಅದ್ರಿಕಾ ಅಪ್ಸರಸಿ ಯಮುನೆಯ ಇನ್ನೊಂದು ಬದಿಯಲ್ಲಿ ಮೀಯುತ್ತ, ನೀರಿನಲ್ಲಿ ಮುಳುಗಿ ಬ್ರಾಹ್ಮಣನ ಸಮೀಪ ಬಂದು ಹಾಸ್ಯಕ್ಕಾಗಿ ಅವನ ಕಾಲುಗಳನ್ನು ಹಿಡಿದು ಎಳೆದಳು.

ಬ್ರಾಹ್ಮಣನು ಬಹು ಕೋಪದಿಂದ "ಮೀನಾಗಿ ನೀರಲ್ಲೇ ಬಿದ್ದಿರು" ಎಂದು ಶಪಿಸಿಬಿಟ್ಟನು. ಅವಳು ಅವನ ಕಾಲು ಹಿಡಿದುಕೊಂಡು ಬಳಬಳನೆ ಅತ್ತಳು. ಬ್ರಾಹ್ಮಣನು ಕನಿಕರಗೊಂಡು ಸ್ವಲ್ಪ ಕಾಲದ ವರೆಗೆ ಮೀನಾಗಿದ್ದು, ಒಬ್ಬ ಮಗನೂ ಮಗಳೂ ನಿನ್ನ ಬಸಿರಲ್ಲಿ ಹುಟ್ಟಿದ ಮೇಲೆ ನಿನಗೆ ನಿಜರೂಪ ಬರುತ್ತೆ" ಎಂದು ಶಾಪಕ್ಕೆ ವಿಮೋಚನೆ ಹೇಳಿ ಹೊರಟು ಹೋದನು. ಅಂದಿನಿಂದ ಅವಳು ಯಮುನಾ ನದಿಯಲ್ಲೇ ಮೀನಾಗಿದ್ದಳು.

ಕಾಲ ಕೂಡಿದುದರಿಂದ ವಸುವಿನ ಸಂಸ್ಪರ್ಶವಾಗಿ ಆ ಮೀನು ಗರ್ಭಧರಿಸಿತು. ಸ್ವಲ್ಪ ಕಾಲದಲ್ಲಿ ಆ ಮೀನು ಬೆಸ್ತನ ಬಲೆಯಲ್ಲಿ ಬಿದ್ದು ಅವನ ಮನೆಗೆ ಹೋಯಿತು. ಬೆಸ್ತನು ಆ ಮೀನನ್ನು ಕೊಯ್ಯುವಾಗ ಅದರ ಹೊಟ್ಟೆಯಲ್ಲಿ ಒಂದು ಗಂಡು ಇನ್ನೊಂದು ಹೆಣ್ಣು ಮಾನವ ಶಿಶುಗಳು ಕಾಣಿಸಿದುವು. ಅವನು ಆ ಶಿಶು ಗಳನ್ನು ಎತ್ತಿಕೊಂಡು ಹೋಗಿ ವಸುರಾಜನಿಗೆ ತೋರಿಸಿದನು. ಸಮಾಚಾರ ತಿಳಿದು ವಸುವೂ ಆಶ್ಚರ್ಯಪಟ್ಟು, ಗಂಡು ಮಗುವನ್ನು ತಾನಿಟ್ಟುಕೊಂಡು, ಹೆಣ್ಣು ಮಗುವನ್ನು ಆ ಬೆಸ್ತನಿಗೇ ಕೊಟ್ಟುಬಿಟ್ಟನು. ಬೆಸ್ತನು ಆ ಮಗುವಿಗೆ ಕಾಲಿಕಾ ಎಂದು ಹೆಸರಿಟ್ಟರೂ ಮತ್ಸ್ಯೋದರಿ, ಮತ್ಸ್ಯಗಂಧಿ ಎಂಬ ಹೆಸರೂ ಪ್ರಸಿದ್ಧವಾಯಿತು.

ವಸುರಾಜನು ಗಂಡು ಮಗುವಿಗೆ ಮತ್ಸ್ಯನೆಂದೇ ಹೆಸರಿಟ್ಟನು. ಮತ್ಸ್ಯನು ಉಪರಿಚರ ವಸುವಿನ ಮನೆಯಲ್ಲೇ ಬೆಳೆಯುತ್ತಬಂದನು.

ಮೀನಿನ ರೂಪ ಹೋದ ಕೂಡಲೇ ಅದ್ರಿಕಳ ಶಾಪ ವಿಮೋಚನೆಯಾಗಿ, ಅಪ್ಸರೆಯಾಗಿ ತನ್ನ ಲೋಕಕ್ಕೆ ಹೊರಟು ಹೋದಳು.



# ಪ್ರತಿಜ್ಞೆ ಸತ್ತಿತು

ಚತುರಾವರ್ತದಲ್ಲಿ ಒಬ್ಬ ಧನಿಕನ ಮಗನಾಗಿ ಸುದರ್ಶನನೆಂಬವನಿದ್ದನು.

ತಂದೆ ತೀರಿಹೋದ ಮೇಲೆ ಕೇಳುವವರಿಲ್ಲದೆ, ಅವನು ಎಲ್ಲಾ ಬಗೆಯ ದುರ್ವ್ಯಸನಗಳಿಗೂ ದಾಸನಾಗಿ, ಇದ್ದುದನ್ನೆಲ್ಲಾ ಕಳೆದುಕೊಂಡನು. ಕಡೆಗೆ ಸ್ನೇಹಿತರಾಗಿ ನಟಿಸಿಕೊಂಡಿದ್ದವರಿಂದಲೂ ತಿರಸ್ಕರಿಸಲ್ಪಟ್ಟು ಹೆಂಡತಿಯೊಂದಿಗೆ ಆ ಊರು ಬಿಟ್ಟೇ ಹೊರಟನು. ಆಗ ಅವನನ್ನು ನೋಡಿ ಅವನ ಹಳೆಯ ಮಿತ್ರರು ಗಟ್ಟಿಯಾಗಿ ನಕ್ಕರು.

"ನಾನು ಮತ್ತೆ ಐಶ್ವರ್ಯವಂತನಾಗಿ ಬಂದು ನಿಮ್ಮೆಲ್ಲರನ್ನೂ ನನ್ನಸುತ್ತಲೂ ನಾಯಿಯಂತೆ ತಿರುಗಾಡಿಸಿಕೊಳ್ಳದೆ ಹೋದರೆ ನಾನು ಸತ್ತಹಾಗೇ ಲೆಕ್ಕ" ಎಂದು ಎಲ್ಲರಿಗೂ ಕೇಳುವಂತೆ ರೋಷದಿಂದ ಕೂಗಿ ಹೇಳಿ ಪ್ರತಿಜ್ಞೆ ಮಾಡಿದನು ಸುದರ್ಶನ.

ಮತ್ತೊಂದು ಊರಿನಲ್ಲಿ ಅವನು ವ್ಯಾಪಾರಮಾಡಿ, ಕಳೆದುಕೊಂಡ ಧನಕ್ಕಿಂತಲೂ ಹೆಚ್ಚಾಗೇ ಸಂಪಾದಿಸಿ, ತನ್ನ ಪ್ರತಿಜ್ಞೆಯನ್ನು ಅಮಲು ಪಡಿಸಲಿಕ್ಕಾಗಿ ಚತುರಾವರ್ತಕ್ಕೆ ಹೊರಟನು.

ದಾರಿಯಲ್ಲಿ ಒಂದು ರಾತ್ರಿ ಆ ಗಂಡಹೆಂಡಿರು ಒಂದು ಸತ್ರದಲ್ಲಿ ಉಳಿದರು.

ಆ ರಾತ್ರಿ ಸತ್ರದ ಜಗಲಿಯಲ್ಲಿ ಕೆಲವುಮಂದಿ ಕುಳಿತುಕೊಂಡು ಜೂಜಾಡುತ್ತಿದ್ದರು. ಸುದರ್ಶನನು ಆ ಆಟದಲ್ಲಿ ಸೇರಿ, ಉತ್ಸಾಹದಿಂದ ಮೈ ಮರೆತು ಇದ್ದುದನ್ನೆಲ್ಲಾ ಒಡ್ಡಿ ಆಡುತ್ತ ಬೆಳಗಾಗುವುದರೊಳಗೆ ಇರುವುದನ್ನೆಲ್ಲಾ ಕಳೆದುಕೊಂಡನು.

ಬೆಳಗಾದಮೇಲೆ ಅವನು ಹೊರಡುವ ಪ್ರಯತ್ನದಲ್ಲಿರುವುದನ್ನು ನೋಡಿ ಹೆಂಡತಿ "ನಿಮ್ಮ ಪ್ರತಿಜ್ಞೆ ಹೇಗೆ ನೆರವೇರಿಸುವುದು ?" ಎಂದಳು.

"ಪ್ರತಿಜ್ಞೆ ನೆರವೇರಿಸದಿದ್ದರೆ ನಾನು ಸತ್ತ ಹಾಗೇ ಲೆಕ್ಕ ಅಂತ ಹೇಳಿದ್ದೇನಲ್ಲ ? ಹಾಗೇ ಆಯಿತು. ಆಗಲಿ! ಕುಡುಕನೂ ಜೂಜುಗಾರನೂ ಆದ ಸುದರ್ಶನ ಎಂದೋ ಸತ್ತಾಯಿತು! ಸತ್ತವನು ಇನ್ನು ಎದ್ದು ಬರುವ ಮಾತೇ ಇಲ್ಲ, ಬಿಡು," ಎಂದನು ಸುದರ್ಶನ.





# ಕಳ್ಳನಿಂದಬುದ್ಧಿ

ಒಂದು ಊರಿನಲ್ಲಿ ಗೌರೀ ಚಿರಂಜೀವಿಗಳೆಂಬ ದಂಪತಿಗಳಿದ್ದರು. ಹೆಂಡತಿಯಾದ ಊರ್ಮಿಳೆ ತುಂಬ ಸಾಧು, ಸರಳೆ. ತಾನಾಯಿತು, ತನ್ನ ಕೆಲಸವಾಯಿತು ಎಂಬಂತಿರುವವಳು. ಅವಳ ಗಂಡ ಚಿರಂಜೀವಿಗೆ ಪ್ರಭುತ್ವ ಕಾರ್ಯಾಲಯದಲ್ಲಿ ಬರವಣಿಗೆಯ ಉದ್ಯೋಗವಿದ್ದಿತು. ಅವನಿಗೆ ಚಿಕ್ಕಂದಿನಿಂದಲೂ ಅಸಹನೆಯೂ ಕೋಪವೂ ಹೆಚ್ಚು.

ಅಂದಮೇಲೆ ಸಾಧು ಊರ್ಮಿಳೆ ಅವನೊಂದಿಗೆ ಹೇಗಿದ್ದಳೋ ಊಹಿಸಬಹುದು. ಹೊಸದಾಗಿ ಗಂಡನ ಬಳಿಗೆ ಬಂದಾಗಲೇ ಗಂಡನೆಂದರೆ ಭಯವೇ. ಗಂಡ ಹೇಳುವ ಮಾತು ಕೂಡ ಭಯದಿಂದಾಗಿ ಅವಳಿಗೆ ಸರಿಯಾಗಿ ಅರ್ಥವಾಗುತ್ತಿದ್ದಿಲ್ಲ. ಆ ಕಾರಣದಿಂದಾಗಿ ಗಂಡ ಹೇಳಿದ ಕೆಲಸವನ್ನು ಯದ್ವಾತದ್ವಾ ಮಾಡಿ ಗಂಡನಿಂದ ಇನ್ನಷ್ಟು ಪೆಟ್ಟು ತಿನ್ನುತ್ತಿದ್ದಳು.

ಒಂದು ದಿನ ಸಾಯಂಕಾಲ ಚಿರಂಜೀವಿ ನೀರುಳ್ಳಿ ಗಿಡವನ್ನು ಕೊಂಡುಕೊಂಡು ಬಂದು ಹೆಂಡತಿಯ ಹತ್ತಿರ ಕೊಟ್ಟು, "ಇದರ ಬುಡದಲ್ಲಿರುವ ಗಡ್ಡೆಗಳನ್ನು ಪಲ್ಯ ಮಾಡು. ಬಾಕಿ ಇರುವ ದಂಟು ಸೊಪ್ಪು ಸಣ್ಣಗೆ ಹೆಚ್ಚಿ ಹುಳಿ ಮಾಡು. ನಾನು ರಾಮಾಲಯಕ್ಕೆ ಹೋಗಿ ಬರುತ್ತೇನೆ." ಎಂದು ಹೇಳಿ ಹೊರಟು ಹೋದನು.

ಗಂಡನು ಮಾತಾಡಲು ತೊಡಗಿದಾಗಲೇ ಗಾಬರಿಯಿಂದ ಬುದ್ಧಿ ಮಂಕಾಗಿಬಿಡುವ ಊರ್ಮಿಳೆಯ ಕಿವಿಗೆ ಪಲ್ಯ, ಹುಳಿ, ಅನ್ನಗಳ ಸಂಗತಿಯಷ್ಟೇ ಕೇಳಿಸಿದ್ದಿತು. ಅವಳು ನೀರುಳ್ಳಿಯ ಗಡ್ಡೆಯನ್ನು ಸಣ್ಣಗೆ ಹೆಚ್ಚಿ ಬೇಳೆಯೊಂದಿಗೆ ಹುಳಿ ಮಾಡಿದಳು. ಸೊಪ್ಪನ್ನು ಹೆಚ್ಚಿ ಪಲ್ಯ ಮಾಡಿಟ್ಟಳು. ಆಮೇಲೆ ಗಂಡನ ದಾರೀ ನೋಡುತ್ತ ಕಾದುಕುಳಿತಳು. ಮನಸ್ಸಿನಲ್ಲಿ ಗಂಡನು ಬಂದು ಇನ್ನೇನು ಬಯ್ಯುವನೋ, ಹೊಯ್ಯುವನೋ ಎಂಬ ಚಿಂತೆ.

ಆ ದಿನ ರಾತ್ರಿ ಸ್ವಲ್ಪ ಹೊತ್ತಾದ ಮೇಲೆಯೇ ಚಿರಂಜೀವಿ ಮನೆಗೆ ಬಂದ. "ನಾನು ಹೇಳಿದ ಹಾಗೇ ಅಡಿಗೆ ಮಾಡಿರುವಿಯಷ್ಟೆ? ಬಡಿಸು, ಬಡಿಸು" ಎಂದನು ಬಂದ ಕೂಡಲೇ.

"ಆ ಮಾಡಿದ್ದೇನೆ. ನೀರುಳ್ಳಿಗಡ್ಡೆ ಹುಳೀ, ಅದರ ಸೊಪ್ಪು ಪಲ್ಯ..." ಎಂದು ಊರ್ಮಿಳೆ ಹೇಳಿದ್ದೇ ತಡ, ಚಿರಂಜೀವಿ ಕೋಪದಿಂದ, ಹೊರಬಾಗಿಲನ್ನು ದಢಾಲ್ಲನೆ ಹಾಕಿ ಬಂದು, "ನೀನು ಯಾವಾಗಲೂ

ಎಂ. ಕೆ. ಈಶ್ವರರಾವ್

ಹೀಗೆಯೇ. ನಾನು ಹೇಳುವುದೊಂದು, ಮಾಡುವುದೊಂದು. ಪೆಟ್ಟು ತಿಂದ ಹೊರತು ಬುದ್ಧಿ ಬಾರದು" ಎನ್ನುತ್ತಾ ಅವಳ ಬೆನ್ನಿಗೆ ನಾಲ್ಕು ಗುದ್ದಿದನು. ಊರ್ಮಿಳೆ ಗೋಡೆಗೆ ಒರಗಿ ಅಳುತ್ತಾ ಕುಳಿತಳು.

"ಅಳುತ್ತಾ ಕುಳಿತರೆ ಆಗಿ ಹೋಯಿತೇನು? ನನ್ನ ಕರ್ಮಕ್ಕೆ ನೀನೇನು ಮಾಡಿದರೂ ನಾನು ತಿನ್ನಬೇಕಾಗಿದೆ. ಹುಂ, ಬಡಿಸು!" ಎಂದನು.

ಅಷ್ಟರಲ್ಲಿ ಅಟ್ಟದ ಮೇಲಿನಿಂದ ಯಾವನೋ ದಭಾಲ್ಲನೆ ಹಾರಿ ಮುಂದೆ ಬಂದ. ಅವನೊಬ್ಬ ಕಳ್ಳ. ಸಾಯಂಕಾಲ ಹೊತ್ತಿನಲ್ಲಿ ಅವನು ಮನೆಯೊಳಗೆ ಪ್ರವೇಶಿಸಿ ಅಟ್ಟದ ಮೇಲೆ ಅಡಗಿ ಕುಳಿತು ಸಮಯ ಕಾಯುತ್ತಿದ್ದ. ಅವನ ಕರ್‍ರಗಿನ ಶರೀರವೂ, ಕೋರೆ ಮೀಸೆಗಳೂ, ಕೈಯಲ್ಲಿ ಹಿಡಿದ ಹದನಾದ ಕತ್ತಿಯೂ ಚಿರಂಜೀವಿಯನ್ನು ನಡುಗಿಸಿದುವು. ಏನೂ ತೋರದೆ ಅವನು ಕಣ್ಣರಳಿಸಿ ಬೆಪ್ಪನ ಹಾಗಾದ.

ಕಳ್ಳನು ಕತ್ತಿಯನ್ನು ಚಿರಂಜೀವಿಯ ಕುತ್ತಿಗೆಯ ಮೇಲಿಟ್ಟು, "ಮರದ ಕೊರಡಿನ ಹಾಗೆ ನಿಂತಿಯೇಕೆ? ಮನೆಯಲ್ಲಿರುವ ನಗೆನಟ್ಟುಗಳನ್ನೆಲ್ಲಾ ಗಂಟು ಕಟ್ಟಿ ಕೊಡು ಬೇಗ!" ಎಂದನು ಕರ್ಕಶವಾಗಿ.

ಚಿರಂಜೀವಿ ಥರಥರಿಸುತ್ತ, "ಸ್ವಲ್ಪ ಕತ್ತಿಯನ್ನು ಕೆಳಗಿಳಿಸಿರಿ! ಕದಲಲಿಕ್ಕೂ ಸಾಧ್ಯವಿಲ್ಲವಾಗಿದೆ!" ಎಂದು ತೊದಲಿದನು.

ಕಳ್ಳ ಕತ್ತಿಯನ್ನು ಕೆಳಗಿಳಿಸಿ, "ಹುಂ, ನಡಿ!" ಎಂದು ಅವನನ್ನು ಮುಂದೆಬಿಟ್ಟು ಹಿಂದೆಯೇ ಹೋದನು. ಚಿರಂಜೀವಿ ಪೆಟ್ಟಿಗೆಯ ಹಣವನ್ನೂ, ನಗಗಳನ್ನೂ ಗಂಟು ಕಟ್ಟಿ ಕಳ್ಳನ ಕೈಗೆ ಕೊಟ್ಟನು.

ಕಳ್ಳ ಆ ನಗಗಳ ಮೂಟೆಯನ್ನು ಕಂಕುಳಲ್ಲಿಟ್ಟುಕೊಂಡು, "ಎಲ್ಲಿ ನೀರುಳ್ಳಿಗಡ್ಡೆಯ ಹುಳೀ, ನೀರುಳ್ಳಿ ಸೊಪ್ಪಿನ ಪಲ್ಯಾ? ನಿನ್ನ ಹೆಂಡತೀ ಹತ್ರ ಬೇಗ ಬಡಿಸಲಿಕ್ಕೆ ಹೇಳು" ಎಂದನು ಚಿರಂಜೀವಿಯೊಂದಿಗೆ.

ಚಿರಂಜೀವಿ ಊರ್ಮಿಳೆಯನ್ನು ಅಸಹನೆಯಿಂದ ಹುಬ್ಬು ಗಂಟಿಕ್ಕಿ ನೋಡುತ್ತ, "ಹಾಗೆ ಪಿಳಿಪಿಳಿ ನೋಡುತ್ತಾ ಕೂತಿದ್ದೀಯಾ? ಬೇಗ ಈ ಕಳ್ಳಾವರಿಗೆ ಬಡಿಸು ಮತ್ತೆ" ಎಂದು ಕೋಪದಿಂದ ಗರ್ಜಿಸಿದನು.



ಊರ್ಮಿಳೆ ಬೇಗನೆದ್ದು ಕಳ್ಳನ ಮುಂದೆ ಬಟ್ಟ
ಲನ್ನು ತೊಳೆದಿಟ್ಟು, ನೀರಿಟ್ಟು ಊಟ ಬಡಿಸಿದಳು.
ಕಳ್ಳ ಊಟ ಮಾಡುವಾಗ ಚಿರಂಜೀವಿ ಗಾಳಿ
ಬೀಸುತ್ತಾ ಅವನ ಪಕ್ಕದಲ್ಲೇ ಕುಳಿತ.

"ಆಹಾ! ಏನು ರುಚಿ ಈ ಪಲ್ಯಕ್ಕೆ! ಅಮೃತದ
ಹಾಗಿದೆ ಹುಳಿ! ಭೇಷ್! ಭೇಷ್!" ಎನ್ನುತ್ತ ಕಳ್ಳ
ಪಾತ್ರದಲ್ಲಿದ್ದುದನ್ನೆಲ್ಲ ಖಾಲಿ ಮಾಡಿ, ಚಿರಂಜೀವಿ
ಯೊಂದಿಗೆ "ಏಯ್! ನೀನೊಬ್ಬ ಮನುಷ್ಯನೇನಾ ?
ಇಷ್ಟು ಚೆನ್ನಾಗಿ ಅಡುಗೇ ಮಾಡುವವಳನ್ನು
ಸಾಯುವ ಹಾಗೆ ಹೊಡೆಯುವೆಯಲ್ಲಾ? ನಿನ್ನ ಮನೆ
ಯಲ್ಲಿದ್ದುದನ್ನೆಲ್ಲಾ ದೋಚಿಕೊಂಡ ನನಗೆ ಹೆಂಡತಿಯ
ಕೈಯಿಂದ ಊಟ ಬಡಿಸಿಸಿ, ಗಾಳಿ ಬೀಸುತ್ತ ಕುಳಿ
ತಿರುವಿಯಲ್ಲ! ಎಂದು ಬಿದ್ದು ಬಿದ್ದು ನಕ್ಕನು.

ಆ ಮಾತು ಚಿರಂಜೀವಿಗೆ ತಲೆ ಕತ್ತರಿಸಿದ
ಹಾಗಾಯಿತು. ಕಳ್ಳನು ಮಾತನ್ನು ಮುಂದುವರಿ
ಸಿದನು: "ನಾನು ಹೇಗೆ ಕಳ್ಳನಾದೇ ಅಂತ ನಿನಗೆ
ಗೊತ್ತಿದೆಯೋ ? ನನ್ನ ಅಪ್ಪ ಒಬ್ಬ ಪಕ್ಕಾ ಕುಡುಕ.
ಕುಡಿದು ಬಂದು ನನ್ನ ಅಮ್ಮನನ್ನು ಕಂಡಾಬಟ್ಟೆ
ಹೊಡೆಯುತ್ತಿದ್ದ. ನನ್ನ ಅಮ್ಮ ಕೂಲಿ ಕೆಲಸಕ್ಕೆ
ಹೋಗುವವಳು. ಸಿಕ್ಕಿದ ಹಣವನ್ನು ಅಪ್ಪನಿಗೆ
ಗೊತ್ತಿಲ್ಲದ ಹಾಗೆ ಅಡಗಿಸಿಟ್ಟು ನನಗೆ ಸ್ವಲ್ಪ ಓದಿಸಿ
ದಳು. ಅಪ್ಪ ಆ ಅಡಗಿಸಿಟ್ಟ ಹಣವನ್ನು ಸಹಾ
ಕಂಡುಹಿಡಿದು, ತಡೆಯಲಿಕ್ಕೆ ಬಂದ ಅಮ್ಮನನ್ನು
ಹೊಡೆದುಹಾಕಿ ಎಲ್ಲಾ ಹಣ ಕುಡಿದು ಹಾಳು
ಮಾಡಿದ. ಆ ಪೆಟ್ಟಿನ ಗಾಯದಿಂದಲೇ ಅಮ್ಮ
ಕಡೆಗೆ ಸತ್ತುಹೋದಳು. ನನಗೆ ಆ ಮನೆಯಲ್ಲಿ ಇರ
ಲಿಕ್ಕೆ ಹಿಡಿಸದೆ ಎಲ್ಲೆಲ್ಲೋ ತಿರುಗತೊಡಗಿದೆ. ಓದೂ
ಇಲ್ಲ, ಬರೆಹವೂ ಇಲ್ಲ. ಕಷ್ಟಪಟ್ಟು ಸಂಪಾದಿಸುವ
ಕಷ್ಟ ಬೇಡಾ ಅಂತ ಕಂಡಿತು. ಇದೇ ಲಾಭವಾಗಿ
ತೋರಿತು. ಹೀಗೆ ಕಳ್ಳನಾದೆ. ಗಂಡ ಹೆಂಡಿರು
ಅನ್ಯೋನ್ಯವಾಗಿ ಚೆಂದದಲ್ಲಿ ಸಂಸಾರ ನಡೆಸಿದರೆ,
ಮಕ್ಕಳು ನನ್ನ ಹಾಗೆ ಆಗಲಾರರು ಗೊತ್ತಾ ?
ನೀರುಳ್ಳಿಯ ಸೊಪ್ಪಿಗೂ ಗಡ್ಡೆಗೂ ಒಂದೇ ಪರಿಮಳ
ಇದೆ ತಾನೇ ? ರುಚಿಯೂ ಒಂದೇ. ಹಾಗೆಯೇ
ಗಂಡ ಹೆಂಡಿರೊಳಗೂ ಒಂದೇ ಬಗೆಯ ಭಾವನೆ ಇರ
ಬೇಕೋ ಬೇಡವೊ ? ಇನ್ನಾದರೂ ಹೆಂಡತಿಯನ್ನು
ಹೆದರಿಸದೆ ಅನ್ಯೋನ್ಯವಾಗಿರು." ಎಂದು ಹೇಳಿ
ಕಳ್ಳನು ಎದ್ದು, ತನ್ನ ಕಂಕುಳಲ್ಲಿದ್ದ ನಗಗಳ ಮೂಟೆ
ಯನ್ನು ಊರ್ಮಿಳೆಗೆ ಕೊಟ್ಟು ಹೊರಟುಹೋದನು.

ಆಮೇಲೆ ಚಿರಂಜೀವಿ ಹೆಂಡತಿಯ ಮೇಲೆ ಕೈ
ಮಾಡಲಿಲ್ಲ. ಕ್ರಮೇಣ ಊರ್ಮಿಳೆಯೂ ಗಂಡ
ನನ್ನು ನೋಡಿ ಹೆದರ ಬೇಕಾಗಿಲ್ಲದೆ ಹೋಯಿತು.
ಆ ಮನೆಯಲ್ಲಿ ಸುರಗವು ಹೊರಡತೊಡಗಿತು.
ಸಂತೋಷದ ಗಾಳಿ ಎದ್ದಿತು.



# ಬದಲಾವಣೆಯ ರಹಸ್ಯ

ಒಂದು ದಿನ ವಿಜಯನಗರದ ಮಹಾರಾಜ ಕೃಷ್ಣದೇವರಾಯನೊಂದಿಗೆ ಮಹಾಮಂತ್ರಿ ತಿಮ್ಮರಸನು, "ನಮ್ಮ ಆಯುಧಾಗಾರದ ಜಾಗವನ್ನು ಬದಲಾಯಿಸುತ್ತೇನೆ" ಎಂದು ತಿಳಿಸಿದನು.

ಅಂತಹ ಅಗತ್ಯವೇನು ಬಂತೆಂದು ಕೃಷ್ಣದೇವರಾಯನು ಕೇಳಿದನು. ಅದಕ್ಕೆ ತಿಮ್ಮರಸು ಹೀಗೆಂದನು :

"ನಮ್ಮ ಸೈನ್ಯದ ರಹಸ್ಯ ಆಯುಧಾಗಾರದ ಪ್ರಧಾನಾಧಿಕಾರಿಯ ಹತ್ತಿರ ಕೆಲಸಮಾಡುವ ಮುಖ್ಯಸ್ಥ ನೊಬ್ಬ ಸತ್ತನು. ಆ ಸತ್ತವನ ಮಕ್ಕಳಿಬ್ಬರೂ ಧನವನ್ನು ನೀರಿನ ಹಾಗೆ ಖರ್ಚು ಮಾಡುವರೆಂದು ತಿಳಿದುಬಂತು. ಸತ್ತುಹೋದವನು ತನ್ನ ನ್ಯಾಯವಾದ ಸಂಪಾದನೆಯಲ್ಲಿ ಅಷ್ಟು ಹಣ ಉಳಿಸಲು ಸಾಧ್ಯವಿಲ್ಲ. ಅವನು ನಮ್ಮ ಆಯುಧಾಗಾರದ ರಹಸ್ಯಗಳನ್ನು ಬಹಮನೀ ಸುಲ್ತಾನರಿಗೆ ವಿಕ್ರಯಿಸಿರಬೇಕು".

"ಅದು ನಿಮ್ಮ ಅನುಮಾನ ಮಾತ್ರತಾನೇ ?" ಎಂದು ಕೇಳಿದನು ಕೃಷ್ಣದೇವರಾಯ.

"ಅನುಮಾನವಲ್ಲ, ನಿಜವೇ ! ಈ ನಡುವೆ ಬಹಮನೀ ಸುಲ್ತಾನರಿಗೆ ನಮ್ಮ ಆಯುಧಾಗಾರದ ರಹಸ್ಯ ಗಳನ್ನು ಮಾರುವ ಆಸಕ್ತಿಯನ್ನು ತೋರಿಸಿ ನೋಡಿದೆ. ಅವರು ಅದರಲ್ಲಿ ಸ್ವಲ್ಪವೂ ಆಸಕ್ತಿ ತೋರಿಸಲಿಲ್ಲ. ಅವರಿಗೆ ಆ ರಹಸ್ಯಗಳು ಗೊತ್ತಿದೆ ಎಂದೇ ಆಯಿತು. ಸತ್ತುಹೋದ ಉದ್ಯೋಗಸ್ಥನು ದೇಶದ್ರೋಹಿಯೇ ನಿಜ!" ಎಂದನು ತಿಮ್ಮರಸು.

ಕೂಡಲೇ ಅವನ ಮಾತಿನಂತೆ ಆಯುಧಾಗಾರವನ್ನು ಬೇರೆ ಸ್ಥಳಕ್ಕೆ ಬದಲಾಯಿಸಲು ಕೃಷ್ಣದೇವರಾಯನು ಅನುಮತಿ ಕೊಟ್ಟನು.



# ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

## ಗೆದ್ದ ಶೀರ್ಷಿಕೆಗಳು ೧೯೭೬ ಮೇ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



S. G. Seshagiri



Mohan D. Desai

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಮಾರ್ಚಿ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

## ಜನವರಿ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: ಕಿತ್ತರೆ ಹೊರೆ ತುಂಬ!

ಎರಡನೇ ಫೋಟೋ: ಬಿತ್ತಿದರೆ ಮನೆ ತುಂಬ!

ಕಳುಹಿಸಿದವರು: ಪಿ. ಎನ್. ವಿಜಯಲಕ್ಷ್ಮಿ,

೬೭೧, ೧೧ನೇ ಮೈನ್‌ರೋಡ್, ೪ನೇ ಬ್ಲಾಕ್, ಬೆಂಗಳೂರು—೧೧

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 - (India). Controlling Editor: NAGI REDDI.

# NP 007
# ಬಬಲ್ ಗಮ್

**ಉಚಿತ**
ನಿಮ್ಮ 007 ಪ್ಯಾಕ್‌ನಲ್ಲಿ ನಿಮಗೆ ಬಿಳಿಯ ಬಬಲ್ ಗಮ್ ಸಿಕ್ಕಿದರೆ, ಆಗಲೇ ಅಂಗಡಿಯವನಿಂದ ಇನ್ನೊಂದು 007 ಬಬಲ್ ಗಮ್‌ನ್ನು ಕೇಳಿ ಉಚಿತವಾಗಿ ಪಡೆಯಿರಿ.

ಆಟಗಳಲ್ಲಿ ನಿಜವಾದ ಮಲ್ಲ, ಮತ್ತು ಪಾಠಗಳಲ್ಲಿ ಪ್ರವೀಣ! ಅವನಿಗೆ ಗೊತ್ತಿದೆ ಕೇವಲ NP 007 ಬಬಲ್ ಗಮ್ ಹೆಚ್ಚು ದೊಡ್ಡದಾದ, ಹೆಚ್ಚು ಸೊಗಸಾದ ಬುದ್ಬುದಗಳನ್ನು ಕೊಡಬಲ್ಲುದು, ಎಂದು. ಏಕೆಂದರೆ ಅದರಲ್ಲಿ 'ಬುದ್ಬುದ ಶಕ್ತಿ' ತುಂಬಿತುಳುಕುತ್ತಿದೆ!

NP 007 ಬಬಲ್ ಗಮ್‌ನ ಸಹಾಯದಿಂದ ನೀವೂ ಬುದ್ಬುದ ಮಲ್ಲನಾಗಬಹುದು! ಹೆಚ್ಚು ದೊಡ್ಡದಾದ, ಸೊಗಸಾದ ಬುದ್ಬುದಗಳನ್ನು ಊದಿ ಉಬ್ಬಿಸಿ ಆನಂದಿಸಿರಿ.




ಇಂತಹ ಬುದ್ಬುದಗಳನ್ನು ನಿಮಗೆ ಕೇವಲ 007 ಬಬಲ್ ಗಮ್ ನೀಡಬಲ್ಲುದು. ಐ.ಎಸ್.ಐ. ಗುಣಮುದ್ರೆಯನ್ನು ಹೊಂದಿರುವ ಏಕಮಾತ್ರ ಬಬಲ್ ಗಮ್‌ನ ತಯಾರಕರೂ, ಈ ಕ್ಷೇತ್ರದಲ್ಲಿ ಮೊದಲಿಗರೂ ಆದ NP ಅವರ ಕೊಡುಗೆ.

**NP ಬಬಲ್‌ಗಮ್ ಎಂದರೆ 'ಬುದ್ಬುದ ಶಕ್ತಿ'**

## ಜಯವಾಗಲಿ
# ಬುದ್ಬುದ ಮಲ್ಲನಿಗೆ

NP

*Dattaram–NP-15 Kan*

ದಿ ನ್ಯಾಷನಲ್ ಪ್ರೊಡಕ್ಟ್ಸ್, ಬೆಂಗಳೂರು.

# ರಾಜೂ ಮತ್ತು ಮೊಗವಾಡ

ಆದಿನ ರಾಜೂನ ಚಿಕ್ಕ ತಂಗಿ ಮೀನಾಳ ಹುಟ್ಟುಹಬ್ಬ. ರಾಜೂಗೆ ಅದು ಭಾರಿ ಸಂತೋಷದ ಸಂದರ್ಭ. ನಂದು, ವಿನಯ್, ರೇಖಾ, ಅಶೋಕ್ ಎಲ್ಲರೂ ಬರಲಿದ್ದಾರೆ, ಚೆಂದದ ಉಡುಗೊರೆಗಳನ್ನು ತರಲಿದ್ದಾರೆ.

ರಾಜೂ ಯಾವ ಉಡುಗೊರೆ ಕೊಡುವುದು ಎಂದು ಯೋಚಿಸ ತೊಡಗಿದ. ಅದು ವಿಶೇಷ ತರದ, ಬಲು ಅಸಾಧಾರಣವಾದ ಉಡುಗೊರೆಯಾಗಬೇಕು ಎಂದು ಅವನ ಇಚ್ಛೆ.

ಅವನು ಯೋಚಿಸತೊಡಗಿದ. ಬಹಳ, ಬಹಳ ಯೋಚನೆ ಮಾಡಿದ. ಥಕ್ಕನೆ ಅವನಿಗೆ ಒಂದು ವಿಚಾರ ಹೊಳೆಯಿತು.

ಮೊಗವಾಡ, ಸುಂದರವಾದ, ವರ್ಣರಂಜಿತ ಮೊಗವಾಡವನ್ನು ಉಡುಗೊರೆಯಾಗಿ ಕೊಡಬೇಕು. ಟೋಪಿಯ ಮೇಲೆ ಹಸುರು ಪಟ್ಟಿಗಳಿರಬೇಕು, ಗಲ್ಲ ನಸುಗೆಂಪಾಗಿರಬೇಕು. ತುಟಿಗಳು ಕಡು ಕೆಂಪಾಗಿರಬೇಕು.

ಒಂದು ರಟ್ಟು ಹಾಳೆಯ ತುಂಡನ್ನು ಆಕಾರಕ್ಕೆ ಸರಿಯಾಗಿ ಕತ್ತರಿಸಿ, ಒಂದು ಬ್ರಶ್‌ನಿಂದ ಬೇಕಾದಂತೆ ಬಣ್ಣ ಹಚ್ಚಿ ಬಲು ಬೇಗನೆ ಒಂದು ಮೊಗವಾಡವನ್ನು ಸಿದ್ಧಗೊಳಿಸಿದನು.

ಎಷ್ಟು ವರ್ಣರಂಜಿತವಾದ ಉಡುಗೊರೆ! ಮೀನಾಳಿಗೆ ಆನಂದವೇ ಆನಂದ!

ರಾಜೂನನ್ನು ಮತ್ತು ಅವನ ಅದ್ಭುತ ಉಡುಗೊರೆಯನ್ನು ಎಲ್ಲರೂ ಹೊಗಳಿದರು.

ರಾಜೂಗೆ ಪೇಂಟ್ ಮಾಡುವುದು ಸಾಧ್ಯವಾದರೆ ನಿಮಗೂ ಸಾಧ್ಯವಾಗುವುದು.



## ಕ್ಯಾಮೆಲ್

ವಾಟರ್ ಕಲರ್ಸ್
ಮತ್ತು ಪೋಸ್ಟರ್ ಕಲರ್ಸ್.









ಕ್ಯಾಮ್ಲಿನ್ ಅನ್‌ಬ್ರೇಕೆಬಲ್ ಪೆನ್ಸಿಲ್‌ಗಳ ತಯಾರಕರಿಂದ

ಕ್ಯಾಮ್ಲಿನ್
ಪ್ರೈವೇಟ್
ಲಿಮಿಟೆಡ್,
ಆರ್ಟ್ ಮಟೀರಿಯಲ್
ಡಿವಿಜನ್, ಜೆ. ಬಿ. ನಗರ್,
ಬೊಂಬಾಯಿ-400 059.

VISION 781 KAN



# ಕರಡಿಕೆಂಗಣ್ಣ

೮

[ದುರ್ಮುಖರಾಜನು ತನ್ನ ಬೆಂಬತ್ತುವ ಕಟುಕ ಕರಡಿ ಮನುಷ್ಯನಿಗೆ ಸಿಕ್ಕದೆ ಓಡುತ್ತ, ಉಗ್ರದಂಡ ರಾಕ್ಷಸನನ್ನು ಕಂಡು ಮಹಾಭೀತಿಯಿಂದ ಮೂರ್ಛೆಹೋದನು. ಉಗ್ರದಂಡನು ಅವನನ್ನು ಮೂರ್ಛೆಯಿಂದ ಎಬ್ಬಿಸಲು ನೀರುತರಲು ಅಂಗರಕ್ಷಕನನ್ನು ಕಳುಹಿಸಿದನು. ಅವನು ನೀರು ತರುವಾಗ ಮೊಂಡು ಸೊಂಡಿಲಿನ ಆನೆ ಅವನನ್ನು ನೋಡಿ ಘೀಂಕರಿಸುತ್ತ ಓಡಿಸಿಕೊಂಡು ಬಂದಿತು. ಅಂಗರಕ್ಷಕನು ಕಿರಿಚುತ್ತಾ ಓಡಿಬಂದನು.]

ಉಗ್ರದಂಡರಾಕ್ಷಸನು ಆಶ್ಚರ್ಯದಿಂದ, ಇತ್ತಲೇ ಬರುವ ಆನೆಯನ್ನು ನೋಡಿ, "ಇದೆಂಥ ಆನೆ? ಹೀಗಿದೆಯಲ್ಲಾ? ಅದೇಕೆ ಈ ಹುಲುಮನುಷ್ಯನನ್ನು ಓಡಿಸಿಕೊಂಡು ಬರುತ್ತೆ?" ಎಂದುಕೊಂಡು ಕಟುಕ ಕರಡಿಯವನನ್ನು ನೋಡಿ, "ಈ ಸೊಂಡಿಲು ಮುರಿದ ಆನೆ ನಿನ್ನ ವಾಹನವೇ? ಇದನ್ನು ಕೂಡಾ ಕರಡಿಕೆಂಗಣ್ಣ ಮಾಂತ್ರಿಕರೇ ಸೃಷ್ಟಿಸಿದರೋ? ನೋಡಿದರೆ ಬರೇ ಕಾಡಾನೆಯ ಹಾಗೇ ಇದೆ! ಹೆದರುವಷ್ಟು ವಿಶೇಷವೇನಿಲ್ಲವಲ್ಲಾ!" ಎಂದನು. "ಹೌದು. ಕಾಡಾನೆಯೇ. ಮಹಾಮಾಂತ್ರಿಕರು ಸೃಷ್ಟಿಸಿದ್ದೇನಲ್ಲ. ಇದು ಕಾಡಿನಲ್ಲಿ ನನ್ನ ದಾರಿಗೆ ಅಡ್ಡ ಬಂದುದರಿಂದ ನನ್ನ ಚಪಗೊಡಲಿಯಿಂದ ಅದರ ಸೊಂಡಿಲಿನ ಮೇಲೆ ಹೊಡೆದು ಖಂಡಿಸಿ, ಮೇಲೇರಿ ಕುಳಿತು ಕಿವಿತಿರುಗಿಸಿದ ಮೇಲೆ ನನಗೆ ವಶವಾಯಿತು. ಅದರ ಮೇಲೇರಿಕೊಂಡೇ ಇಲ್ಲಿಯವರೆಗೂ ಬಂದೆ" ಎಂದನು ಕಟುಕಕರಡಿಮನುಷ್ಯ.

ಇಷ್ಟು ಮಾತಾಡುವಷ್ಟರಲ್ಲಿ ಆನೆ ಅವರ ಸಮೀಪ ಬಂದಿತು. ಅದನ್ನು ನೋಡಿ ಕಳ್ಳರನಾಯಕ ನಾಗಮಲ್ಲನೂ ಅವನ ಇಬ್ಬರು ಅನುಚರರೂ ಗುಹೆಯ ಕಡೆಗೆ ಓಡಿದರು. "ಈ ಆನೆ ಈ ದುರ್ಮುಖನನ್ನು



ಮೆಟ್ಟಿ ಹಾಕುತ್ತೇನೋ" ಎಂದು ಗೊಣಗುತ್ತ ಉಗ್ರದಂಡನು ಒಂದಡಿ ಮುಂದಿಟ್ಟು ಬಿದ್ದಿದ್ದ ದುರ್ಮುಖನಿಗೆ ಅಡ್ಡ ನಿಂತನು.

ಅಷ್ಟರೊಳಗೇ ದುರ್ಮುಖರಾಜನ ಮೂರ್ಛೆ ತಿಳಿದಿತ್ತೆಂದು ಕಾಣುತ್ತದೆ, ಅವನು ತಟ್ಟನೆದ್ದು ನಿಂತವನೇ, ಬಾಣದ ವೇಗದಲ್ಲಿ ಓಡಿ ಮರಗಳ ಗುಂಪಿನೆಡೆಯಲ್ಲಿ ನುಗ್ಗಿಕೊಂಡು ಹೋದನು. ಅಂಗರಕ್ಷಕನೂ ಆನೆಯನ್ನು ನೋಡಿ ಕಿರಿಚುತ್ತ ಉಗ್ರದಂಡ ರಾಕ್ಷಸನ ಹಿಂಬದಿಗೆ ಹಾರಿ ನಿಂತನು.

ಉಗ್ರದಂಡನು ಅಂಗರಕ್ಷಕನನ್ನು ನೋಡಿ ಅಸಹ್ಯದಿಂದ ತನ್ನ ಕಲ್ಲಿನ ಗದೆಯನ್ನು ಎತ್ತಿ, "ಎಲೋ ಕುನ್ನೀ, ಇದೀಗ ನೀನು ನನ್ನ ಅಂಗರಕ್ಷಕನೆಂದು ಹೇಳಿದವನಲ್ಲವೇನೋ? ಈಗ ನಾನೇ ನಿನ್ನ ಅಂಗರಕ್ಷಕನ ಹಾಗೆ ವರ್ತಿಸುವೆಯಲ್ಲಾ? ಛೀ! ಪುಕ್ಕಲು ಅಧಮಾ!" ಎಂದು ಗರ್ಜಿಸಿದನು. ಅಷ್ಟರಲ್ಲಿ ಅಲ್ಲಿಗೆ ಬಂದ ಆನೆ ರಾಕ್ಷಸನ ಆಕೃತಿಯನ್ನು ನೋಡಿ ಬದಿಗೆ ತಿರುಗಿತು. ಆಗ ಕರಡಿಕಟುಕನು ತನ್ನ ಕೊಡಲಿಯನ್ನು ತಿರುಗಿಸುತ್ತ ಆನೆಯ ಮುಂದೆ ಹೋಗಿ, "ನಿಲ್ಲು ಗಜವೀರಾ! ನನ್ನನ್ನು ಗುರುತಿಸಲಿಲ್ಲವೇನು? ಕಟುಕರನಾಯಕ ಭಲ್ಲೂಕಮನುಷ್ಯ ನಾನು! ನೀನು ನನ್ನ ವಾಹನ!" ಎಂದು ಕೂಗಿ ಹೇಳಿದನು.

ಅವನ ಮಾತು ಮುಗಿಯುವುದರೊಳಗೇ ಆನೆ ಅವನನ್ನು ಸೊಂಡಿಲಿನಿಂದ ಸುತ್ತಿಹಿಡಿದು ಎತ್ತಿ ದೂರಬೀಸಲು ನೋಡಿತು. ಅಷ್ಟರೊಳಗೆ ಉಗ್ರದಂಡರಾಕ್ಷಸನು ಮುಂದೆ ಹಾರಿ, ಆನೆಯ ಕಿವಿ ಹಿಡಿದು ಹಿಂಡುತ್ತ, ಅದರ ಪಕ್ಕೆಯ ಮೇಲೆ ಗಟ್ಟಿಯಾಗಿ ತನ್ನ ಕಲ್ಲಿನ ಗದೆಯಿಂದ ಒಂದೇಟು ಕೊಟ್ಟನು.

ಆ ಸಿಡಿಲಿನಂಥ ಪೆಟ್ಟಿಗೆ ಆನೆ ಕಟುಕ ಕರಡಿಯವನನ್ನು ಕೆಳಕ್ಕೆ ಜಾರಿಸಿ, ದಢೀಲನೆ ನೆಲದ ಮೇಲೆ ಬಿತ್ತು. ಮತ್ತೆ ಅದು ಏಳದಂತೆ ಉಗ್ರದಂಡನು ಮಿಂಚಿನ ವೇಗದಲ್ಲಿ ಅದರ ಮುಂದಿನ ಎರಡು ಕಾಲುಗಳನ್ನೂ ಸೇರಿಸಿ ಹಿಡಿದು ಮೇಲೆ ಎತ್ತುತ್ತ, "ಎಲೋ ಅಂಗರಕ್ಷಕಾ! ಓಡಿ ಹೋಗಿ ಕಾಡುಬಳ್ಳಿಗಳಿಂದ ನಾರು ತೆಗೆದುಕೊಂಡು ಬಾ. ಇದರ ಕಾಲುಗಳನ್ನು ಕಟ್ಟಿಹಾಕಬೇಕು!" ಎಂದನು.

ರಾಕ್ಷಸನು ತೋರಿಸಿದ ಅವನ ಗುಹೆ ಇರುವ ಗುಡ್ಡದ ಬಳಿಗೆ ಅಂಗರಕ್ಷಕನು ಮರಗಿಡಗಳ ಗುಂಪಿನೊಳಗೆ ತೂರಿಕೊಂಡು ಓಡಿದನು. ಇದನ್ನೆಲ್ಲ ನೋಡಿ ಕಟುಕಕರಡಿಯವನು ಮರಗಟ್ಟಿದಂತೆ ನಿಂತು, ಕಣ್ಣುಗಳನ್ನು ಮುಚ್ಚುತ್ತ ತೆರೆಯುತ್ತ, ಎಡಗೈಯಿಂದ ತಲೆಯನ್ನು ಗಟ್ಟಿಯಾಗಿ ತಡವುತ್ತ, "ಅಯ್ಯಾ, ಉಗ್ರದಂಡ ಮಹಾಪ್ರಭೂ, ನನ್ನ ಮಂತ್ರಕೊಡಲಿಯ ಶಕ್ತಿಗಿಂತಲೂ ನಿನ್ನ ಶರೀರ ಶಕ್ತಿ ನೂರುಪಾಲು ಹೆಚ್ಚು. ನನ್ನನ್ನು ಪ್ರಾಣಾಪಾಯದಿಂದ ಕಾಪಾಡಿದೆ. ನಿನಗೆ ತಂಬಾ ಮೆಚ್ಚಿದೆನು. ನಿನಗೇನು ಬೇಕೋ ಕೇಳು.

ಕೊಟ್ಟುಬಿಡುತ್ತೇನೆ. ಕೇಳಯ್ಯ" ಎಂದನು. ಉಗ್ರದಂಡ ರಾಕ್ಷಸನು ಕಟುಕಕರಡಿಯವನನ್ನು ನೋಡಿ ತುಟಿಗಳಲ್ಲಿ ಮುಗುಳುನಗು ತೇಲಿಸುತ್ತ, "ನಾನು ಕೇಳುವಂತಹುದೇನಾದರೂ ಇದ್ದರೆ, ಅದು ನಿನ್ನ ಹತ್ತಿರ ಏನಿದೆ ಮಣ್ಣು? ನಿನ್ನ ಗುರು ಕರಡಿಕೆಂಗಣ್ಣ ಮಾಂತ್ರಿಕನೇನಾದರೂ ಕೊಟ್ಟರೆ ಕೊಡಬೇಕು. ಪ್ರಸ್ತುತ ಈ ಕೆರಳಿದ ಆನೆ ಎದ್ದು ಮತ್ತೇನಾದರೂ ಅನಾಹುತಮಾಡದ ಹಾಗೆ, ನನ್ನ ಜತೆಯಲ್ಲಿ ಇದರ ಕಾಲು ಸ್ವಲ್ಪ ಬಿಗಿಯಾಗಿ ಹಿಡಿದುಕೋ, ಸಾಕು" ಎಂದನು.

ಕರಡಿಕಟುಕನು ಉಗ್ರದಂಡರಾಕ್ಷಸನನ್ನು ಚುರ ಚುರನೆ ನೋಡುತ್ತ, "ಈ ನನ್ನ ಗುಲಾಮ ಪ್ರಾಣಿಯ ಕಾಲನ್ನು ನಾನು ಹಿಡಿಯುವುದೇ? ಇದಕ್ಕಿಂತ ಹೆಚ್ಚಿನ ಅವಮಾನ ಇದೆಯೆ? ನೋಡೀಗ, ಈ ಕ್ಷಣದಲ್ಲಿ ಈ ಮಂತ್ರದ ಚಪಗೊಡಲಿಯಿಂದ ಇದರ ತಲೆಯನ್ನು ನೂರು ಹೋಳು ಮಾಡುತ್ತೇನೆ!" ಎಂದು ಕೊಡಲಿಯನ್ನು ಎತ್ತಿದನು.

"ಎಲೋ ಮಹಾನರಮನುಷ್ಯನೇ! ಸ್ವಲ್ಪ ತಾಳು. ಇಷ್ಟುಕಾಲ ಕಟುಕಕಾರ್ಯ ಮಾಡಿಕೊಂಡಿದ್ದವನಲ್ಲವೇ ನೀನು? ಇಷ್ಟೆಲ್ಲಾ ಮಾತುಗಳನ್ನು ಕೊಚ್ಚಲು ಹೇಗೆ ಕಲಿತೆಯಪ್ಪಾ? ಈ ಹೆಣದಂಥ ಆನೆಯನ್ನು ಮಹಾಪ್ರತಾಪದಿಂದ ಕೊಂದುಬಿಟ್ಟೆಯಾದರೆ ಆಮೇಲೆ ನೀನು ಬಂದ ಕೆಲಸ ಸಾಧಿಸಿಕೊಂಡು ನಿನ್ನ ಯಜಮಾನನ ಬಳಿಗೆ ಹೇಗೆ ಹೋಗಬಲ್ಲೆ? ನಾನು ಹೇಳಿದ್ದೇನು, ನೀನು ಮಾಡಿದ್ದೇನು ಅಂತ ಆತ ಕೇಳಿದರೆ ಏನು ಹೇಳುವೆ?" ಎಂದು ಕೇಳಿದ ಉಗ್ರದಂಡ.

ಹೀಗೆ ರಾಕ್ಷಸನು ನೆನಪು ಮಾಡಿದ ಕೂಡಲೇ, ಕಟುಕಕರಡಿಯವನು "ಹೌದೌದು! ಎಲ್ಲಿ? ಎಲ್ಲಿ ಆ ದುರ್ಮುಖರಾಜ? ಈ ನಿಮಿಷದವರೆಗೂ ಅವನಿಲ್ಲಿ ನೆಲಕಚ್ಚಿಕೊಂಡಿದ್ದನಲ್ಲ? ಅಷ್ಟರೊಳಗೆ ಎಲ್ಲಿಗೆ ಹೋದ? ಹೇಗೆ ಮಾಯವಾದ? ಏನಿದು ಆಶ್ಚರ್ಯವಾಗಿದೆಯಲ್ಲಾ!" ಎಂದು ದಿಕ್ಕುಗಳನ್ನು ನೋಡತೊಡಗಿದನು.





ಇವರ ನಡುವೆ ಆನೆ ಉಗ್ರದಂಡರಾಕ್ಷಸನ ಹಿಡಿತದಿಂದ ವಿಮೋಚನೆ ಪಡೆಯಲು ಘೀಂಕರಿಸುತ್ತ, ಉರುಡಾಡಿಕೊಂಡಿತ್ತು. ಉಗ್ರದಂಡನು ಅದರ ಕಾಲನ್ನು ಬಿಡಲಿಲ್ಲ. ಹೂಂಕಾರದಿಂದಲೇ ಆನೆಯನ್ನು ಹೆದರಿಸುತ್ತಿದ್ದನು. ಹಾಗೆಯೇ ಅಂಗರಕ್ಷಕನು ಓಡಿದ ಕಡೆಗೆ ನೋಡಿ, "ಎಷ್ಟು ಹೊತ್ತೋ ಅಂಗರಕ್ಷಕಾ! ನಾಲ್ಕು ಕಾಡುಬಳ್ಳಿಗಳನ್ನು ಕಡಿದುಕೊಂಡು ಬರಲು ಇಷ್ಟು ಹೊತ್ತೆ? ಇವನೊಬ್ಬ ಅಂಗರಕ್ಷಕನಂತೆ! ಪುಕ್ಕಲು ನಡುಕದ ಭಂಡ!" ಎಂದು ಕೂಗಿದನು.

"ಇದೋ ಹಗ್ಗ ತಂದೆವು ಉಗ್ರದಂಡಯ್ಯಾ!" ಎನ್ನುತ್ತ ಕಳ್ಳನಾಗಮಲ್ಲನೂ, ಅವನ ಇಬ್ಬರು ಅನುಚರರೂ ಬಲವಾದ ಹಗ್ಗದ ಸುರುಳಿಯೊಂದಿಗೆ ಓಡೋಡಿ ಬಂದರು.

ಉಗ್ರದಂಡನು "ಭಲೇ, ನೀವು ತಂದಿರಾ? ಹುಂ, ನಾನು ಗಟ್ಟಿಯಾಗಿ ಹಿಡಿದುಕೊಳ್ಳುತ್ತೇನೆ. ಕಟ್ಟಿರಿ ಇದರ ಕಾಲುಗಳನ್ನು" ಎಂದನು.

ನಾಗಮಲ್ಲನ ಅನುಚರರೇ ರಾಕ್ಷಸನು ಹೇಳಿದ ಕೆಲಸ ಮಾಡುತ್ತಿರಲು ರಾಕ್ಷಸನು, "ಆಹ! ಕಳ್ಳರೆಂದರೆ ನೀವೇ ನಿಜವಾದ ಕಳ್ಳರು. ಯಾವುದಕ್ಕೆ ಎಂತಹ ವಸ್ತು ಬೇಕಾಗುತ್ತದೋ ಎಲ್ಲಾ ಮುಂದಾಗಿಯೇ ಸಿದ್ಧಮಾಡಿ ತಯಾರಾಗಿರುತ್ತೀರಿ. ಭಲೇ" ಎಂದು ಹೊಗಳಿದನು.

"ಹೌದು ಉಗ್ರದಂಡ ರಾಕ್ಷಸರೇ! ಎಷ್ಟಾದರೂ ನಾವು ಸಾಧಾರಣ ಅರಣ್ಯಜೀವಿಗಳು. ನೀವು ಇಲ್ಲಿಂದ ಹೋಗುವ ಮೊದಲು ನಮ್ಮದೊಂದು ಆಸೆಯನ್ನು ನೆರವೇರಿಸಿ ಕೊಡಬೇಕು" ಎಂದು ನಾಗಮಲ್ಲನು ಕೈ ಮುಗಿದನು.

"ಅದಕ್ಕೇನೂ ಕಷ್ಟವಿಲ್ಲ. ಈ ಕೊಲೆಗಡುಕ ಕಟುಕನಾಯಕನಿಂದ ನಿಮ್ಮ ಮೂವರ ತಲೆಗಳನ್ನೂ ಒಂದೇಸಾರಿ ಕಡಿಸಬೇಕೆಂದು ಕೇಳುವಿರಿ, ಹೌದಾ?" ಎಂದು ಕೇಳಿದ ಉಗ್ರದಂಡ.

ನಾಗಮಲ್ಲನ ಸರ್ವಾಂಗ ಕಂಪಿಸುತ್ತಿರಲು, ಏನೋ ಹೇಳಲು ಪ್ರಯತ್ನಿಸುವಾಗ, ಕಟುಕ ಕರಡಿಯವನು, "ಜೈ ಕಾಲಭೈರವಾ!" ಎಂದು ಭೀಕರವಾಗಿ ಕೂಗಿ, "ಎಲೋ, ದಾರಿ ದೋಚುವ ಘಾತುಕರೇ! ಆ ದುರ್ಮುಖರಾಜ ಎಲ್ಲಿದ್ದಾನೆ? ಎಲ್ಲಿ ಅವನನ್ನು ಅಡಗಿಸಿಟ್ಟಿರಿ? ತತ್‌ಕ್ಷಣ ಹೇಳದೇ ಹೋದರೆ ನಿಮ್ಮ ತಲೆಗಳನ್ನು ಬೆನ್ನಿನ ಅಡಿಯವರೆಗೂ ಕೆತ್ತಿಹಾಕಿಬಿಡುತ್ತೇನೆ" ಎಂದನು ಕೊಡಲಿಯನ್ನು ಕುಣಿಸುತ್ತ.

ಕಳ್ಳರ ನಾಯಕನು ತಡವರಿಸುವ ಧ್ವನಿಯಿಂದ, "ದುಡುಕಿ ಹಾಗೆಲ್ಲಾ ಮಾಡಬೇಡಿ! ಮೊದಲು ದುರ್ಜಯಶೆಟ್ಟಿ ತಾನೆಂದು ಸುಳ್ಳು ಹೇಳಿದ ಆ ದುರ್ಮುಖನೆಂಬ ರಾಜ ನಿಮ್ಮ ಎದುರೇ ಮೂರ್ಛೆಬಿದ್ದುದನ್ನು ನೋಡಿದಿರಿ. ಉಗ್ರದಂಡರೂ ನೋಡಿದ್ದಾರೆ, ನಾವು ಆ ಪಾಪಿಯನ್ನು ಮುಟ್ಟೇ ಇಲ್ಲ. ಇಲ್ಲೇ ಎಲ್ಲಿಯಾದರೂ ಅಡಗಿದ್ದಾನು." ಎಂದನು.

"ನಾನೂ ಅದನ್ನೇ ಕೇಳುತ್ತೇನೆ. ದೂರದಲ್ಲಿ ನೋಡುತ್ತಿದ್ದ ನಿಮಗೆ ಗೊತ್ತೇ ಇದೆ. ಅವನೀಗ ಎಲ್ಲಿ ಅಡಗಿದ್ದಾನೆ ಅಂತ ಕೇಳುತ್ತೇನೆ. ನಾನು ಅವನ ತಲೆಯನ್ನು ತೆಗೆದುಕೊಂಡು ಹೋಗದೇ ಹೋದರೆ, ಕರಡಿ ಕೆಂಗಣ್ಣ ಮಾಂತ್ರಿಕರು ನನ್ನ ತಲೆಯನ್ನೇ ತೆಗೆಯುತ್ತಾರೆ ಗೊತ್ತಾ ?" ಎಂದನು ಕಟುಕ ಕರಡಿಯವನು ಕಡೆಗೆ ಅಳುಮೋರೆ ಮಾಡಿಕೊಂಡು !

ಅಷ್ಟು ಹೊತ್ತಿಗೆ ನಾಗಮಲ್ಲನ ಕಡೆಯವರಿಬ್ಬರೂ ಆನೆಯ ಮುಂದಿನ ಕಾಲುಗಳನ್ನು ಸೇರಿಸಿ ಬಿಗಿಯಾಗಿ ಕಟ್ಟಿ ಮುಗಿಸಿದರು. ಅದು ಹಿಂದಿನ ಕಾಲುಗಳನ್ನು ಜಾಡಿಸುತ್ತಾ ಏಳಲು ಪ್ರಯತ್ನ ಪಡುತ್ತಿದ್ದಿತು. ಅದರ ಹೊರಳಾಟದಿಂದ ಪುಡಿಗಲ್ಲುಗಳೂ ಧೂಳುಗಳೂ ಏಳುತ್ತಿದ್ದುವು.

ಆಗ ಅಲ್ಲಿಗೆ ಅಂಗರಕ್ಷಕನು ಉದ್ದವಾದ ಕಾಡು ಬಳ್ಳಿಗಳನ್ನು ಸುತ್ತಿ ಹೆಗಲಮೇಲಿಟ್ಟುಕೊಂಡು ಓಡುತ್ತಾ ಬಂದನು.

"ಬಂದೆಯಾ ಈಗ ಮದುಮಗನ ಹಾಗೆ. ಹುಂ, ಆನೆಯ ಹಿಂದಿನ ಕಾಲುಗಳನ್ನು ಜೋಡಿಸಿ ಕಟ್ಟಿರಿ." ಎಂದು ನಾಗಮಲ್ಲನ ಕಡೆಯವರಿಗೆ ಹೇಳಿ ಉಗ್ರದಂಡನು, "ಏನೋ ಅಂಗರಕ್ಷಕಾ, ತಲೆ ತಗ್ಗಿಸಿ ಏನು ನೋಡುವೆ ? ಯಾವುದೋ ರಹಸ್ಯವನ್ನು ಅಡಗಿಸಿಡಲು ನೋಡುವೆ, ಹೌದಾ ? ದುರ್ಮುಖ ರಾಜನನ್ನು ಎಲ್ಲಿಯಾದರೂ ಅಡಗಿಸಿಟ್ಟು ಬಂದೆಯೋ ಇಲ್ಲವೋ ?" ಎಂದು ಕೇಳಿದನು.

ಅಂಗರಕ್ಷಕನು ರಾಕ್ಷಸನಿಗೆ ಕೈಮುಗಿದು, "ನಾನು ಈಗ ನಿಮಗೆ ಅಂಗರಕ್ಷಕನಲ್ಲವೇ ರಾಕ್ಷಸ ಪ್ರಭುವೇ ? ಆ ರಾಜನಿಗೂ ನನಗೂ ಇನ್ನು ಯಾವ ಸಂಬಂಧವೂ ಇಲ್ಲ" ಎಂದನು.

ಕಟುಕ ಕರಡಿಯವನು ಅಂಗರಕ್ಷಕನ ಹತ್ತಿರ ಬರುತ್ತ ಹಲ್ಲು ಕಡಿಯುತ್ತ, "ಎಲೋ, ಆ ದುರ್ಮುಖನು ಎಲ್ಲಿ ಅಡಗಿದ್ದಾನೆಂಬುದು ನಿನಗೆ



ಗೊತ್ತಿದೆ. ನಿನ್ನ ಕಳ್ಳನೋಟವೇ ಅದಕ್ಕೆ ಸಾಕ್ಷಿ. ನಿಜ ಹೇಳಿ ಬದುಕುವೆಯಾ ? ತಲೆ ಹಾರಿಸಿಬಿಡಲೇ ?" ಎಂದನು ಕೊಡಲಿಯ ಹರಿತವನ್ನು ನೋಡುತ್ತಾ.

ಅಂಗರಕ್ಷಕನು "ಅಯ್ಯೋ" ಎಂದು ಕಿರಿಚಿಕೊಂಡು ಹೋಗಿ ಉಗ್ರದಂಡ ರಾಕ್ಷಸನ ಹಿಂದಿನ ಬದಿಯಲ್ಲಿ ನಿಂತು. "ರಾಕ್ಷಸಪ್ರಭೂ ! ನಿಮ್ಮ ಬಡ ಅಂಗರಕ್ಷಕನನ್ನು ಕಾಪಾಡುವ ಭಾರವು ನಿಮ್ಮದೇ, ಶರಣು ! ಶರಣು !" ಎಂದನು.

ಉಗ್ರದಂಡನು ಅವನ ಕೊರಳ ಹಿಂಬದಿಯನ್ನು ಹಿಡಿದು ಎತ್ತಿ ಈಚೆಗೆ ಎಳೆದು. "ಅವನು ಹೇಳುವ ಹಾಗೆ ನಿನಗೇನೋ ಗೊತ್ತಿರಲೇ ಬೇಕು. ಆ ದುಷ್ಟ ರಾಜ ಎಲ್ಲಿ ಅಡಗಿದ್ದಾನೆಂದು ಹೇಳದೆ ಹೋದರೆ, ನಿನ್ನ ಶರೀರದ ಮೇಲಿರುವ ತಲೆಯನ್ನು ಕಾಪಾಡಲು ನನ್ನಿಂದಾಗದು. ನೀನು ಕಾಡುಬಳ್ಳಿಗಳನ್ನು ಹರಿಯಲು ಹೋದಾಗ ಓಡಿಹೋದ ಆ ರಾಜನನ್ನು ನೋಡದೆ ಬಿಡಲಾರೆ. ಅವನೊಂದಿಗೆ ಏನೋ ಹಂಚಿಕೆ ಹೂಡಿ



ಧೈರ್ಯದಿಂದ ಇಲ್ಲಿಗೆ ಬಂದಿರುವೆ. ನಿಜ ತಾನೇ? ಏನು ನಡೆಯಿತೆಂದು ಹೇಳದೆ ಹೋದರೆ, ನಿನ್ನನ್ನು ಈ ಆನೆಯ ಸೊಂಡಿಲಿಗೆ ಒಪ್ಪಿಸಿ ಬಿಡುತ್ತೇನೆ." ಎಂದು ಅವನನ್ನು ಆನೆಯ ಕಡೆಗೆ ಎಳೆದನು.

ಅಂಗರಕ್ಷಕನು ಬೇಡ ಬೇಡವೆಂದು ಕೂಗುತ್ತ ಕೈಗಳೆರಡನ್ನೂ ಜೋಡಿಸಿ ಮೇಲೆತ್ತಿ "ಶರಣು! ಶರಣು! ರಾಕ್ಷಸ ಮಹಾಪ್ರಭೂ! ನೀವು ಹೇಳಿದ್ದು ನಿಜ. ಆ ರಾಜ ನನಗೆ ಅರ್ಧರಾಜ್ಯ ಕೊಡುವುದಾಗಿ ಭಾಷೆಕೊಟ್ಟ. ಹೇಗೋ ನಿಮ್ಮೆಲ್ಲರ ಕಣ್ಣಿಗೂ ಬೂದಿ ಹಾಕಿದ ಹಾಗೆ ಮಾಡಿ ಬಂದುಬಿಟ್ಟರೆ, ಇಬ್ಬರೂ ಕೂಡಿ ಉದಯಗಿರಿ ಪಟ್ಟಣ ಸೇರಿಬಿಡುವಾ ಎಂದ ಆ ರಾಜ. ಆಮೇಲೆ ನನ್ನನ್ನು ಅರ್ಧರಾಜ್ಯಕ್ಕೆ ಅರಸ ನಾಗಿ ಮಾಡುತ್ತಾನಂತೆ." ಎಂದನು.

"ಆ ಠಕ್ಕುರಾಜನ ಮಾತುಗಳನ್ನು ನೀನು ನಂಬಿದೆ, ಅಲ್ಲವೇ? ಗೊತ್ತು ನನಗೆ ನಿನ್ನದು ಮೂರ್ಖಬುದ್ಧಿ ಅಂತ" ಎಂದು ಉಗ್ರದಂಡನು ಗಟ್ಟಿಯಾಗಿ ನಕ್ಕು,

"ಎಲೋ, ಅಂಗರಕ್ಷಕನೆಂಬ ಹುಲುಮಾನವ! ನೀನು ಮನುಷ್ಯನಾಗಿದ್ದು, ಇನ್ನೊಬ್ಬ ಮನುಷ್ಯನ ಮಾತನ್ನು ನಂಬುವಿಯಲ್ಲಾ! ಇದೇ ಮನುಷ್ಯರ ಲ್ಲಿರುವ ಒಂದು ಆಶ್ಚರ್ಯ! ನಾನು ಹೇಳುತ್ತೇನೆ, ನಿನಗೆ ಏನಾಗುತ್ತದೆ ಅಂತ. ಆ ರಾಜನೊಂದಿಗೆ ಪಟ್ಟಣಕ್ಕೆ ಹೋದ ಮೇಲೆ ನಿನಗೆ ನಡೆಯುವುದು ಅರ್ಧ ರಾಜ್ಯಕ್ಕೆ ಅಭಿಷೇಕವಲ್ಲ, ಪಟ್ಟಣದ ನಡುವೆ ಉರಿ ಬಿಸಿಲಿನಲ್ಲಿ ನಿನ್ನನ್ನು ಶೂಲಕ್ಕೇರಿಸುತ್ತಾನೆ, ಗೊತ್ತೋ?" ಎಂದನು.

"ಹೌದು. ನೀವು ಹೇಳುವ ಹಾಗೇ ಆದೀತು. ನಿಮಗೆ ಉದ್ದಂಡ ನಮಸ್ಕಾರ ಉಗ್ರದಂಡ ಮಹಾ ರಾಕ್ಷಸರೇ! ನಾನಿನ್ನು ನಿಮ್ಮನ್ನು ಬಿಟ್ಟು ಎಲ್ಲಿಗೂ ಹೋಗಲಾರೆ. ತಮ್ಮೊಂದಿಗೇ ಅಂಗರಕ್ಷಕನಾಗಿ ಆಯುಷ್ಯವಿರುವವರೆಗೂ ಇರುತ್ತೇನೆ." ಎಂದು ಅಂಗಲಾಚಿಕೊಂಡನು ಅಂಗರಕ್ಷಕ.

ಅದುವರೆಗೂ ನಡೆಯುವುದನ್ನು ನೋಡುತ್ತ ತಲೆ ಯಾಡಿಸಿಕೊಂಡಿದ್ದ ಕಟುಕ ಕರಡಿಯವನು, "ಜೈ ಕರಡಿಕೆಂಗಣ್ಣ ಮಹಾಮಾಂತ್ರಿಕ!" ಎಂದು ಅರಣ್ಯವೇ ನಡುಗುವಂತೆ ಕೂಗಿ, "ಸಾಕು. ಇನ್ನು ನಿಮ್ಮ ಹಾಳು ಹರಟೆಯನ್ನೆಲ್ಲಾ ಕಟ್ಟಿಡಿರಿ! ನಾನು ಬಂದ ಕೆಲಸವೇನು? ಈ ಬೀದೀ ಭಾಗವತವೇನು? ಗುರು ಮಹಾಮಾಂತ್ರಿಕರನ್ನು ಅವಮಾನಿಸಿದ ಉದಯ ಗಿರಿಯ ರಾಜ ದುರ್ಮುಖನನ್ನು ಕೂಡಲೇ ತಂದು ನನ್ನ ಮುಂದೆ ನಿಲ್ಲಿಸುವಿರೋ ಇಲ್ಲವೋ? ಅಲ್ಲ ನಿಮ್ಮೆಲ್ಲರ ತಲೆಗಳನ್ನೂ ಹಾರಿಸಿ ಬಿಡಲೇ? ಈ ಬಳ್ಳಿಯಲ್ಲಿ ನಿಮ್ಮೆಲ್ಲರ ತಲೆಗಳನ್ನೂ ಸುರಿದು ಕೊರಳಿಗೆ ಮಾಲೆ ಮಾಡಿ ಧರಿಸಿಕೊಳ್ಳುತ್ತೇನೆ!" ಎಂದು ಅಬ್ಬರಿಸಿದನು.

ಅವನ ಪ್ರಗಲ್ಭವನ್ನು ಕೇಳಿ ಉಗ್ರದಂಡನು, "ಏಯ್ ಬಡಾಯಿ ಘೋರಮೃಗಮನುಷ್ಯಾ! ಇಷ್ಟು ಜನರ ತಲೆಗಳನ್ನೂ ಕಡಿಯುವ ಶಕ್ತಿ ನಿನ

ಗಿದೆಯೋ ಹೇಳು ಮೊದಲು." ಎಂದು ಗುಡುಗಿದನು. ಕಟುಕ ಕರಡಿಯವನು, ಕೆಂಗಣ್ಣಿನಿಂದ ರಾಕ್ಷಸನನ್ನು ನೋಡುತ್ತ, ಚಪಗೊಡಲಿಯನ್ನು ಮೇಲೆತ್ತಿ, "ಈ ಕೊಡಲಿಯನು ಏನೆಂದುಕೊಂಡೆ ? ಕರಡಿ ಕೆಂಗಣ್ಣ ಮಹಾಮಾಂತ್ರಿಕರ ವರಪ್ರಸಾದ ಪಡೆದದ್ದು ! ಇದರ ವೇಗಕ್ಕೆ ಇದಿರಿಲ್ಲ. ಎಲ್ಲಿ ? ನಿನ್ನ ಕಲ್ಲಿನಗದೆ ಇದರ ಏಟನ್ನು ತಾಳುವುದೋ ನೋಡು" ಎಂದು ಉಗ್ರದಂಡನೆಡೆಗೆ ಒಂದಡಿ ಮುಂದಿಟ್ಟನು.

ಉಗ್ರದಂಡ ರಾಕ್ಷಸನು ಎರಡಡಿ ಹಿಂದಿಟ್ಟು. "ನಿನಗೆ ಥಕ್ಕನೆ ಆವೇಶವೂ ದುಡುಕೂ ಬರುತ್ತದೆಂದು ಆ ಮಾಂತ್ರಿಕನಿಗೆ ಗೊತ್ತಿಲ್ಲ ಪಾಪ. ಸ್ವಲ್ಪ ತಾಳು. ನಾವಿಬ್ಬರೂ ಒಬ್ಬರನ್ನೊಬ್ಬರು ಕೊಂದುಕೊಳ್ಳುವುದರಿಂದ ಅಲ್ಪತನದ ದುಷ್ಟರಿಗೆ ಒಳ್ಳೆಯದೇ ಆಗುತ್ತದೆ ಹೊರತು ನಮಗೇನೂ ಪ್ರಯೋಜನವಿಲ್ಲ. ಈ ವಿಷಯ ಮೊದಲೇ ಹೇಳಿದ್ದೇನೆ" ಎಂದನು.

"ಅದು ಸರಿ. ಆ ದುರ್ಮುಖರಾಜನ ಸಂಗತಿ ಏನು ಅಂತ ? ಅವನ ತಲೆಯಿಲ್ಲದೆ ನಾನು ಗುರು ಮಾಂತ್ರಿಕರ ಹತ್ತಿರ ಹೋಗುವುದು ಹೇಗೆ ? ನೀನೇ ಹೇಳು" ಎಂದನು ಕಟುಕ ಕರಡಿಯವನು.

"ಆ ರಾಜಕುನ್ನಿ ಎಲ್ಲಿಗೆ ಹೋದಾನು? ನಾವೆಲ್ಲರೂ ಕೂಡಿ ಈ ಕಾಡಿನೊಳಗೆಲ್ಲಾ ಹುಡುಕಿಬಿಟ್ಟರಾಯಿತು. ಹೂಗಳ ತೋಟದಲ್ಲಿ ತಿರುಗಾಡಿಕೊಂಡಿದ್ದ ಆ ಜಂಬದ ರಾಜ ಈ ಭಯಂಕರಾರಣ್ಯದಲ್ಲಿ ಸುತ್ತಿಕೊಂಡೇ ಇರುತ್ತಾನೆ. ಒಬ್ಬನೇ ಹೋಗಲು ಅವನಿಂದಾಗದು." ಎಂದನು ಉಗ್ರದಂಡ.

"ಹಾಗೇ ಮಾಡುವ" ಎಂದು ಎಲ್ಲರೂ ಹುಡುಕಲು ಸಿದ್ಧರಾದರು. ಆಗ ದೂರದಿಂದ ಅವರಿಗೊಂದು ಸಾಯುವಂಥ ಕೆಟ್ಟ ಕೂಗು ಕೇಳಿಸಿತು. "ಲೋಲೋ ! ಬೇಗಬಿಡು ಬಾಣ ! ನಾನು ಉದಯಗಿರಿಯ ರಾಜನೋ ! ಅರ್ಧ ರಾಜ್ಯ ಖಂಡಿತಾ ಕೊಡ್ತೇನೋ ! ಹೊಡೀ ಬೇಗ !" ಎಂಬ ಮಾತುಗಳೂ ಕೇಳಿಸಿದುವು.

ಆ ಕಂಠಸ್ವರವು ದುರ್ಮುಖರಾಜನದೇ ! ಏನೋ ಪ್ರಾಣಾಪಾಯದಲ್ಲಿ ಸಿಕ್ಕಿದ್ದಾನೆ. ಅಂಗರಕ್ಷಕನು ಆ



ಕಡೆಗೇ ಓಡುತ್ತ, "ಏನಿದೂ! ನನಗೆ ಕೊಡುತ್ತೇನೆಂದ ಅರ್ಧ ರಾಜ್ಯ ಇನ್ನಾರಿಗೋ ಕೊಡುತ್ತಾನಂತಲ್ಲಾ! ನಾನು ಬಿಡಲಾರೆ!" ಎಂದು ಕೂಗಿ ಹೇಳಿದನು.

ಅಂಗರಕ್ಷಕನು ಆ ಶಬ್ದ ಬಂದ ಕಡೆಗೆ ಹೋದಾಗ, ದುರ್ಮುಖರಾಜನು ಒಂದು ಇಳಿಜಾರಾದ ಮರವನ್ನು ಅಪ್ಪಿಕೊಂಡು ಮೇಲೆ ಮೇಲೆ ತೆವಳುತ್ತ ಏರುತ್ತಿದ್ದನು. ಅವನಿಗಿಂತ ಸ್ವಲ್ಪ ಕೆಳ ಭಾಗದಲ್ಲಿ ಚಿರತೆಯೊಂದು ಗುರುಗುಡುತ್ತ, ಕೋರೆಗಳನ್ನು ತೋರಿಸುತ್ತ ಮೇಲೆ ಮೇಲೆ ಏರುತ್ತಿದೆ. ಮರದ ಕೆಳಗೆ ಕಾಡು ಮನುಷ್ಯನೊಬ್ಬ ಬಿಲ್ಲಿಗೆ ಬಾಣಹೂಡಿ ಚಿರತೆಗೆ ಗುರಿ ನೋಡಿಕೊಂಡಿದ್ದ.

ಅಂಗರಕ್ಷಕನನ್ನು ನೋಡಿದ ಕೂಡಲೇ ದುರ್ಮುಖ ರಾಜನು, "ಬಂದೆಯೇನೋ ಅಂಗರಕ್ಷಕಾ! ಹಾಗೆ ನೋಡುವೆಯೇನೋ? ಈ ಚಿರತೇ ಬಾಯಿಗೆ ನಾನು ಸಿಕ್ಕುವುದರೊಳಗೇ ಅದನ್ನು ಕೊಲ್ಲು ಮತ್ತೆ! ಆ ಕಾಡುಮನುಷ್ಯನ ಕೈಯಿಂದ ಬಿಲ್ಲು ಬಾಣ ಎಳೆದು ಕೊಂಡು, ಬೇಗ ಬಿಡು ಬಾಣ! ಅವನು ಬಾಣ ಬಿಡುವಹಾಗೆ ಸುಮ್ಮನೆ ನಟನೆಮಾಡುತ್ತಾ ಹೊತ್ತು ಕಳೀತಿದ್ದಾನೆ! ನನ್ನ ಕೈ ಮೈ ಸೋತಿತು!" ಎಂದನು.

ಅವನ ಮಾತನ್ನು ಲಕ್ಷ್ಯಮಾಡದೆ ಅಂಗರಕ್ಷಕನು "ಈ ಚಿರತೇನ ಕೊಂದರೆ ಅರ್ಧರಾಜ್ಯ ಕೊಡುತ್ತೇನೆಂದವರು ನೀವು ತಾನೇ ಮಹಾರಾಜರೇ?" ಎಂದು ಜೋರಿನಿಂದ ಕೇಳಿದನು.

"ಹೌದೌದು. ನಾನೇ! ನಾನೇ! ಸಂಶಯ ಪಡಬೇಡವೋ! ಇದು ನನ್ನನ್ನು ಹಿಡಿಯುವುದರೊಳಗೇ ಬಾಣದಿಂದ ಹೊಡಿ. ಬೇಗ ಬೇಗ!" ಎಂದು ದುರ್ಮುಖನು ಕೂಗಿದನು.

"ನಮ್ಮಿಬ್ಬರಿಗೂ ಅರ್ಧರ್ಧ ರಾಜ್ಯ ಕೊಟ್ಟು ಬಿಟ್ಟರೆ ನಿಮಗೇನು ಉಳಿಯುತ್ತದೆ ಮಹಾರಾಜರೇ?" ಎಂದು ಪುನಃ ಕೇಳಿದನು ಅಂಗರಕ್ಷಕ.

"ನನ್ನ ಪ್ರಾಣವೋ ಮೂರ್ಖ, ನನ್ನ ಪ್ರಾಣ!" ಎಂದು ರಾಜನು ಗಟ್ಟಿಯಾಗಿ ಕೂಗಿದನು.

ಕಾಡುಮನುಷ್ಯನು ದುರ್ಮುಖನನ್ನೂ, ಅಂಗರಕ್ಷಕನನ್ನೂ ವಿಚಿತ್ರವಾಗಿ ನೋಡಿ "ನನಗೆ ರಾಜ್ಯವೂ ಬೇಡ. ಮಣ್ಣೂ ಬೇಡ. ಐದು ವರಹಾ ಕೊಟ್ಟರೇ ಸಾಕು." ಎಂದು ಹೇಳುತ್ತ ಮರದ ಮೇಲಿದ್ದ ಚಿರತೆಗೆ ಗುರಿ ಹಿಡಿದು ಬಾಣ ಬಿಟ್ಟ.

ತೀಕ್ಷ್ಣಬಾಣವು ಪಕ್ಕೆಯನ್ನು ನಾಟಿದ ಕೂಡಲೇ ಚಿರತೆ ಒಂದು ಹಾರು ನೆಗೆದು ಸಮೀಪವೇ ಇದ್ದ ರಾಜನನ್ನು ಪಂಜಾದಿಂದ ಹೊಡೆದು ಕೆಳಗೆ ಬಿತ್ತು. ಅದರೊಂದಿಗೇ ದುರ್ಮುಖರಾಜನೂ ಕೂಗಿ ಬಿದ್ದನು. ಚಿರತೆಯ ಕೆಟ್ಟ ಗರ್ಜನೆಯೂ, ರಾಜನ ಸಾವುಕೂಗೂ ಒಟ್ಟು ಬೆರೆತು ಕರ್ಣಕಷಾಯವಾದುವು.

